



# ಕುಲದೀಪಕರು

ಸಿದ್ದವನಹಳ್ಳಿ ಕೃಷ್ಣಶರ್ಮ

ಸಂಪಾದಕ –
ಚಾವಳಿ ಗೋವಿಂದರಾವ್

# ಲಲಿತ ಸಾಹಿತ್ಯ ಮಾಲೆ

**ವರುಷಕ್ಕೆ ನೂರು ನೂರು ಪುಟದ ಆರು ಪುಸ್ತಕ**

**ಚಂದಾ ಅಂಚೆಸೇರಿ ೩-೦-೦**

**೧. ಚಿಗುರು**

**ಸೌ. ಗೌರಮ್ಮನವರ ಕಥಾಸಂಗ್ರಹ ೦—೧೪—೦**

**೨. ಅಕ್ಕಾಜಿ**

(ಶರಚ್ಚಂದ್ರರ ಬಡದಿದಿ)

ಅನುವಾದಕ: **ಶ್ರೀ. ಮೇವುಂಡಿ ಮಲ್ಲಾರಿ ೦—೧೦—೦**

**೩. ಕುಲದೀಪಕರು**

**ಶ್ರೀ. ಸಿದ್ದವನಹಳ್ಳಿ ಕೃಷ್ಣಶರ್ಮರು ಬರೆದ ವ್ಯಕ್ತಿ ಚಿತ್ರಗಳು ೦—೧೦—೦**

**೪, ೫, ೬. ಸಾಹಿತ್ಯರತ್ನ**

**ಶ್ರೀ. ಅ. ನ. ಕೃಷ್ಣರಾಯರ ಸಾಮಾಜಿಕ ಕಾದಂಬರಿ**

**ಲಲಿತ ಸಾಹಿತ್ಯ ಮಾಲೆ, ಧಾರವಾಡ**

**ಮನೋಹರ ಗ್ರಂಥ ಭಾಂಡಾರ, ಧಾರವಾಡ.**

**ಕನ್ನಡ ಪುಸ್ತಕಾಲಯ, ಬೆಳಗಾವಿ**

ಲಲಿತ ಸಾಹಿತ್ಯ ಮಾಲೆಯ ಮೂರನೆಯ ಕುಡಿ

# ಕುಲದೀಪಕರು

ವ್ಯಕ್ತಿ ಚಿತ್ರಗಳು



ಬರೆದವರು :

ಸಿದ್ದವನಹಳ್ಳಿ ಕೃಷ್ಣಶರ್ಮ

ಲಲಿತ ಸಾಹಿತ್ಯ ಮಾಲೆ

ಧಾರವಾಡ

ನವಂಬರ

೧೯೪೨



ಬೆಲೆ

೦-೧೦-೦

ಸಂಪಾದಕರು :

ಚುಳಕಿ ಗೋವಿಂದರಾಯರು

ಮಾರಾಟಗಾರರು :

ಮನೋಹರ ಗ್ರಂಥ ಭಾಂಡಾರ, ಧಾರವಾಡ.

ಕನ್ನಡ ಪುಸ್ತಕಾಲಯ, ಬೆಳಗಾಂವಿ.

ಪ್ರಕಾಶಕರು :
ದ. ಬಾ. ಕುಲಕರ್ಣಿ
ಮ. ಗ್ರಂ. ಭಾಂಡಾರ
ಧಾರವಾಡ

ಮುದ್ರಕರು :
ನಾ. ಅ. ಹೊಸಕೇರಿ
ವಿಜಯ ಮುದ್ರಾಲಯ
ಧಾರವಾಡ

# ಸಂಪಾದಕರ ಮಾತು

ಗೆ. ಸಿದ್ದವನಹಳ್ಳಿ ಕೃಷ್ಣಶರ್ಮರು 'ದೀಪಮಾಲೆ'ಯ ತಮ್ಮ ಮಾತಿನಲ್ಲಿ 'ಇಲ್ಲಿ ಬಂದ ಭಾರತನಾಯಕಮಣಿಗಳಲ್ಲದೆ ಇನ್ನೂ ಕೆಲವರ ವ್ಯಕ್ತಿಪರಿಚಯ ಮತ್ತೊಮ್ಮೆ ಯಾವಾಗಲಾದರೂ ಬರೆಯುವ ಆಸೆಯಿದೆ' ಎಂದು ವ್ಯಕ್ತ ಪಡಿಸಿದ್ದರು. ಇಂದು ಆ ಆಸೆ ವೈಗೊಂಡು **'ಕುಲದೀಪಕರು'** ಎಂದು ಪ್ರಕಟವಾಗುತ್ತಿದೆ ನಮ್ಮ ಈ ಲಲಿತ ಸಾಹಿತ್ಯ ಮಾಲೆಯ ೩ನೆಯ ಮಿಡಿಯಾಗಿ. ಈ ಸಂಗ್ರಹದಲ್ಲಿ ಸೇರಿಸಲ್ಪಟ್ಟ ವ್ಯಕ್ತಿಗಳಲ್ಲದೆ ಇನ್ನೂ ಕೆಲವರ ಪರಿಚಯವು ಸೇರಿಸಬೇಕಿತ್ತು. ಬರೆದು ಕಳಿಸಲು ಅವರು ಹವಣಿಸಿದರು; ಹಾತೊರೆದರು. ನಾವೂ ದಾರೀ ಕಾಯ್ದೆವು. ಆದರೆ ಸಾಧ್ಯವಾಗಲಿಲ್ಲ. ಅವರಿಗೆ ಮಾತ್ರ ಮೈಸೂರು ಸಂಸ್ಥಾನದ ಸೆರೆಮನೆಯ ಮಾಲೆ ಕೊರಳಿಗೆ ಬಿದ್ದಿದೆ ಈಗ. ಹೀಗಾಗಿ ಅವರ ಆಸೆ ಇನ್ನೂ ಒಂದು ಸಂಗ್ರಹಕ್ಕಾಗಿ ಮೀಸಲಾಗಿದೆಯೆಂದು ಹೇಳಬಹುದು "ಕುಲದೀಪಕರು" ತಡವಾಗಿ ಹೊರಟದ್ದಕ್ಕಾಗಿ ಚಂದಾ ದಾರರು ಕ್ಷಮಿಸಬೇಕಾಗಿ ವಿನಂತಿ.

ಗೆ. ಕೃಷ್ಣಶರ್ಮರು ಸಾಹಿತ್ಯಕ್ಷೇತ್ರದಲ್ಲಿಳಿದುದು 'ಸರ್ವಜ್ಞ'ನನ್ನು ಕೈಕ್ಕೆ ಹಾಕಿಕೊಂಡು 'ಹರಟೆಯ ಮಲ್ಲ' ಎಂದು. ಅಂದಮೇಲೆ ಅವರ ಲೆಕ್ಕಣಿಕೆಗೆ ಯಾವುದು ಅಸಾಧ್ಯ? ವ್ಯಕ್ತಿಜೀವನ ಬರೆಬರೆದೇ ವಿಭೂತಿ ಜೀವನವನ್ನೂ ರೇಖಿಸಿ, ತಮ್ಮ ಪ್ರಾತಿಭ ಶಕ್ತಿಯನ್ನು ತೋರಿಸಿ, ಇಂದಿನ ಕನ್ನಡ ಸಾಹಿತ್ಯ ಜೀವನದಲ್ಲಿ 'ಕೃಷ್ಣಶರ್ಮರ ಸಾಹಿತ್ಯ' ಎನ್ನುವಂಥ ಮಟ್ಟಕ್ಕಿಳಿದು ಬಿಟ್ಟಿದಾರೆ ಅವರು. ಅಂಥವರ ಈ ಕೃತಿಯು ನಮಗೆ ದೊರೆತುದಕ್ಕಾಗಿ ನಾವು ಅವರಿಗೆ ಉಪಕೃತರಾಗಿರುವೆವು.

ಈ ಸಂಗ್ರಹದಲ್ಲಿ ಸೇರಿರತಕ್ಕ ಜೀವನಚಿತ್ರಗಳು ಒಂದಿಲ್ಲೊಂದು ವಿಧದಿಂದ ಉಜ್ವಲವಾದವುಗಳೆ ಎನ್ನುವದರಲ್ಲಿ ಯಾವ ಸಂಶಯವೂ ಇಲ್ಲ. ಭಾರತದ ಭಾಗ್ಯವಿಧಾತನ ರಾಜ್ಯದಲ್ಲಿ ಇವುಗಳು ಎಂದಿಗೂ ಬೆಳಗತಕ್ಕುವೆ. ಇವುಗಳ ನೆಲೆ-ಬೆಲೆಗಳು ಅಮಿತವಾಗಿವೆ. ಮಹಾಪುರುಷರ ದಿವ್ಯಜೀವನ ಗಳು ಆದರ್ಶಪ್ರಾಯವಾಗಿ ಸಾಮಾನ್ಯ ಜೀವಿಗಳ ಜೀವನದ ಮಟ್ಟವನ್ನೇರಿಸು

ವದರಲ್ಲಿ ಸಹಾಯಕಾರಿಯಾಗುವವು; ಉಪಯುಕ್ತವಾಗಿರುವವು. ಮಹಾತ್ಮಾ ಗಾಂಧಿಯವರ ಪಟ್ಟಶಿಷ್ಯ–ಮಹದೇವಭಾಯಿ ಇವರ ಬಗ್ಗೆ ಬರೆದ ವ್ಯಕ್ತಿ ಚಿತ್ರದ ಇನ್ನೊಂದು ಭಾಗವನ್ನು ಗೆ. ಕೃಷ್ಣಶರ್ಮರು ಬರೆದು ಕೊಡುವವರಿದ್ದರು. ಅಷ್ಟರಲ್ಲಿ ಅವರು ಬಂಧಿತರಾದ್ದರಿಂದ ಅಷ್ಟಕ್ಕೆ ಉಳಿಯಬೇಕಾಯಿತು. ಇಲ್ಲಿ ಬಂದಿರತಕ್ಕ ವ್ಯಕ್ತಿಚಿತ್ರಗಳೆಲ್ಲವೂ ಹಲವು ಮಾಸಪತ್ರಿಕೆಗಳಲ್ಲಿ ಬೆಳಕು ಕಂಡಿರುವವು. ಅವೆಲ್ಲವೂ ಒಟ್ಟಿಗೆ ಸೇರಿ ಒಂದು ಸಂಗ್ರಹ ರೂಪವಾಗಿ ಪ್ರಕಟವಾದರೆ ಒಳಿತೆಂದು ಭಾವಿಸಿ, ನಾವು ನಮ್ಮ ಮಾಲೆಯ ವಾಚಕರಿಗಾಗಿ ಇದನ್ನು ನೀಡುತ್ತಿದ್ದೇವೆ.

ಮುನ್ನುಡಿ ಬರೆದು ಕೊಟ್ಟಿರುವ ಶ್ರೀಮತಿ ಲೀಲಾ. ಶಿ. ಕಾರಂತರವರಿಗೆ ನಾವು ಕೃತಜ್ಞರಾಗಿದ್ದೇವೆ.

ನಮ್ಮ ಮಾಲೆಯ ಈ ವರುಷದ ಆರು ಪುಸ್ತಕಗಳಲ್ಲಿ ಈಗ ಚಿಗುರು, ಅಕ್ಕಾಜಿ, ಕುಲದೀಪಕರು ಎಂಬ ಮೂರು ಪುಸ್ತಕಗಳನ್ನು ಸಲ್ಲಿಸಿದ್ದೇವೆ. ಇನ್ನುಳಿದ ಮೂರು ಪುಸ್ತಕಗಳನ್ನು ಅಂದರೆ ಮಾಲೆಯ ೪, ೫, ೬ನೆಯ ಹೊತ್ತಗೆಗಳನ್ನು ಒಂದೊಂದನ್ನಾಗಿ ಪ್ರಕಟಿಸದೆ, ಒಟ್ಟಾಗಿ ಒಂದೇ ಪುಸ್ತಕವನ್ನು ಕೊಡಬೇಕೆಂದಿದ್ದೇವೆ. ಅದು ಮಾರ್ಚ ೧೯೪೩ರಲ್ಲಿ ಪ್ರಕಟವಾಗುವದು. ಯಾಕೆಂದರೆ ೧೫೦ ಪುಟದ ಕಾದಂಬರಿಯನ್ನು ಬರೆದು ಕೊಡುವದಾಗಿ ಹೇಳಿದ ಸ್ನೇಹಿತ ಅ. ನ. ಕೃಷ್ಣರಾಯರು ೩೫೦ ಪುಟವಾಗುವಷ್ಟು ದೊಡ್ಡ ಕಾದಂಬರಿಯನ್ನು ಬರೆದು ಕೊಟ್ಟಿದ್ದಾರೆ. ಹೀಗಾಗಿ ಅದನ್ನು ಒಂದೇ ಪುಸ್ತಕದಲ್ಲಿ ಕೊಡುವದೆಂದು ನಿಶ್ಚಯಿಸಿದ್ದೇವೆ. ಕಾರಣ ಚಂದಾದಾರರು ಇದನ್ನು ಗಮನಿಸಬೇಕಾಗಿ ಬಿನ್ನಹ. ಶ್ರೀ. ಅ. ನ. ಕೃಷ್ಣರಾಯರ ಕಾದಂಬರಿಯು ಬರುವದೆಂದು ಮಾರ್ಚದ ವರೆಗೆ ಕಾಯಬೇಕಾಗುವದು.

ಮೂರುಪುಸ್ತಕದ ಬದಲು ಒಂದು ಪುಸ್ತಕವನ್ನು ನಾವು ಸಲ್ಲಿಸಿದರೆ ಈ ವರುಷದ ಆರು ಪುಸ್ತಕಗಳನ್ನು ಸಲ್ಲಿಸಿದಂತಾಯಿತು. ಮತ್ತೆ ನಮ್ಮ ಎರಡನೆಯ ವರುಷದ ಮೊದಲನೆಯ ಪುಸ್ತಕವು ಜೂನದಲ್ಲಿ ಪ್ರಕಟವಾಗುವದು. ಎಂದಿನಂತೆ ವಾಚಕರು ಸಹಾಯವನ್ನು ನೀಡುವರೆಂದು ನಂಬಿರುವೆವು.

---

# ಮುನ್ನುಡಿ



ಕೃಷ್ಣಶರ್ಮರ ಈ ಪುಸ್ತಕಕ್ಕೆ ಮುನ್ನುಡಿ ಬರೆಯಲು ಸಂತೋಷವೂ ಹೆಮ್ಮೆಯೂ ಅನ್ನಿಸುತ್ತಿದೆ. ಆದರೆ ಮಹನೀಯರ ಮುನ್ನುಡಿಯಿಂದ ಅಲಂಕೃತವಾಗಬೇಕಾಗಿದ್ದ ಗ್ರಂಥಕ್ಕೆ ನನ್ನ ಮುನ್ನುಡಿಯೇ—ಎಂದು ಮನಸು ಅಳುಕುತ್ತಿದೆ; ಅಲ್ಲದೆ ಮುನ್ನುಡಿ ಬರೆವ ಯೋಗ್ಯತೆಯೂ ನನಗೆ ಇಲ್ಲ. ನಾನು ತಿಳಿದವಳೆಂದು ಇದನ್ನು ಬರೆಯುತ್ತಲಿಲ್ಲ. ಕೇವಲ ಅವರ ಮೇಲಿನ ಗೌರವದಿಂದ ಇದನ್ನು ಬರೆಯುತಿದ್ದೇನೆ. ನನ್ನ ಮುನ್ನುಡಿ ಬರೆವ ಹುಚ್ಚು ಹಂಬಲಕ್ಕೆ ಬೆಂಬಲವಿತ್ತವರೂ ಶರ್ಮರೇ. ಇದರಿಂದ ಪುಸ್ತಕದ ಅಂದಕ್ಕೆ ಕೊರತೆಯಾಗಿದ್ದರೆ ಅದು ನನ್ನ ತಪ್ಪಲ್ಲ; ಶರ್ಮರ ತಪ್ಪು; ಅವರ ತಪ್ಪು ಇರಲಾರದು. ಗಾಂಧೀ ಭಕ್ತರಾದುದಕೊ ಏನೊ, ಸ್ತ್ರೀಜಾತಿಯ ಮೇಲೆ ಅವರಿಗೆ ಇರುವ ಆದರವು ಇದಕ್ಕೆ ಕಾರಣವಿರಬಹುದು, ಇರಲಿ.

'ಕುಲದೀಪಕರು'— ಎಂಬುದು ಕೆಲವು ವ್ಯಕ್ತಿಚಿತ್ರಗಳ ಸಂಗಹ. ಇದು ಶರ್ಮರು ಬರೆದ ವ್ಯಕ್ತಿಚಿತ್ರಗಳ ಮೂರನೆಯ ಗುಚ್ಛ. 'ಕನ್ನಡದ ಕಿಡಿಗಳು' 'ದೀಪವಾಲಿ'ಯೂ ಮೊದಲೇ ಚಿರಪರಿಚಿತವಾಗಿವೆ. ಈ ಲೇಖಕರು ವ್ಯಕ್ತಿಚಿತ್ರವನ್ನು ಬರೆವ ಹಾದಿಯನ್ನು ತುಳಿಯುತ್ತ ಬಲು ಮುಂದುವರಿದಿದ್ದಾರೆ. ಈ ಸಂಗ್ರಹದಲ್ಲಿರುವ ಕೆಲವು ಚಿತ್ರಗಳು ಈ ಮೊದಲೇ ಮಾಸಪತ್ರಿಕೆಗಳಲ್ಲಿ ಅಚ್ಚಾಗಿವೆ. ಶ್ರೀ ಸಿ. ವಿ. ರಾಮನ್, ವಿಶ್ವೇಶ್ವರಯ್ಯ ಮೊದಲಾದ ಸಾಹಸಿ ಕರ್ಮವೀರರ ಪರಿಚಯಗಳೂ ಇದರಲ್ಲಿ ಸೇರಿವೆ. ಈ ಹೊಸ ಮಾದರಿಯ ಮೂರನೆ ಪುಸ್ತಕವನ್ನು ಓದುಗರ ಮುಂದಿಡುತ್ತಿರುವ ಕೆಲಸ ತುಂಬ ಸಂತೋಷದ ಕೆಲಸ.

ಈ ಲೇಖಕರು ವ್ಯಕ್ತಿಚಿತ್ರವನ್ನು ಬರೆಯುವುದರಲ್ಲಿ ತಮ್ಮದೇ ಆದ ಒಂದು ಹೊಸ ಶೈಲಿಯನ್ನು ಕಲ್ಪಿಸಿಕೊಂಡಿದ್ದಾರೆ. ಅವರದು ಬೆಡಗಿನ ಭಾಷೆಯಾದರೂ ಅದರಲ್ಲಿ ಶಕ್ತಿ ಇದೆ; ಆ ಭಾಷೆ ಜೀವಂತವಾಗಿದೆ. ಓದಲು

ತೊಡಗಿದರೆ ಮನಸೆಳೆದು ಬಿಡುವ ಸವಿಯೂ ಸೊಬಗೂ ಅದರಲ್ಲಿದೆ. ಅವರ ವಾಕ್ಯಸರಣಿಯೂ ಹಾಗೇನೆ, ಯಾವ ಎಡರು ತೊಡರುಗಳಿಲ್ಲದೆ ಸಲಿಲವಾಗಿ ಹರಿಯುತ್ತದೆ. ಆ ಶಬ್ದಶಿಲ್ಪಿಯ ಕೈವಾಡವನ್ನು ಹೆಚ್ಚು ಬಣ್ಣಿಸಬೇಕಾಗಿಲ್ಲ. ಅವರ ಗ್ರಂಥಗಳೇನು ಕನ್ನಡಿಗರಿಗೆ ಹೊಸವಲ್ಲ; ಎಲ್ಲರೂ ಅವುಗಳ ಸವಿಯನ್ನು ಉಂಡು ಸಂತೋಷಪಟ್ಟವರೆ.

ವ್ಯಕ್ತಿಪರಿಚಯ ಬರೆವ ಶರ್ಮರ ಸ್ವತಃ ವ್ಯಕ್ತಿತ್ವವಾದರೂ ಅಷ್ಟೆ, ಹಿರಿದಾದುದು. ಕೃಷ್ಣಶರ್ಮರು ಬಲು ರಸಿಕರು, ಅಲ್ಲದೆ ಸವಿಯಾದ ಮಾತುಗಾರರು. ಅವರ ಬರಹಗಳೆಂತೋ ಅಂತೇ ಮಾತುಗಳು. ಬರಿ ಮಾತುಗಳನ್ನು ಬರೆದರೂ ಬರಹಕ್ಕೂ ಮಾತಿಗೂ ವ್ಯತ್ಯಾಸ ತೋರವು. ಆದ್ದರಿಂದಲೇ ಅವರದು ಜೀವಂತ ಭಾಷೆ ಎಂದೆ. ಅವರು 'ಹರಟೆಮಲ್ಲ' ಆದರೂ ಆ ಹರಟೆಯಲ್ಲೂ ಸವಿ ಇದೆ; ಅದರಲ್ಲಿ ಮನಸನ್ನು ರಂಜಿಸುವ ಶಕ್ತಿ ಇದೆ. ಅವರದು ಪೊಳ್ಳು ಹರಟೆಯಲ್ಲ; ಅನುಭವದಿಂದ ಹದವಾದ ಹರಟೆ. ಅಂಥ ಹರಟೆಗಳಿಗೆ ಸಾಹಿತ್ಯದಲ್ಲಿ ಯಾವಾಗಲೂ ಉಚ್ಚ ಸ್ಥಾನವಿದೆ. ಅದರಲ್ಲಿ ಎಲ್ಲ ತೆರನಾದ ಕಹಿ-ಸಿಹಿ ಅನುಭವಗಳು ಸೇರಿ ಇದ್ದುದರಿಂದಲೇ ಅವರು ಬರವಣಿಗೆಯಲ್ಲಿ ಸಫಲರಾಗಿದ್ದಾರೆ.

ಇನ್ನು ಇದೇ ರೀತಿ ಅವರ ಬರವಣಿಗೆಯು ಮುಂದಕ್ಕೆ ಸಾಗಲಿ. ಅವರ ಲೇಖನಿಯಿಂದ, ಕಥೆ, ಕಾದಂಬರಿಗಳು ವಿಪುಲವಾಗಿ ಹರಿಯಲಿ ಎಂದು ಹಾರೈಸುತ್ತೇನೆ. ಬರಿಯ ವ್ಯಕ್ತಿಚಿತ್ರಗಳನಷ್ಟೆ ಬರೆದರೂ ಸಾಲದು. ಸಾಹಿತ್ಯದ ಉಳಿದ ಶಾಖೆಗಳಲ್ಲೂ ಕೆಲಸ ಮಾಡಬೇಕು. ಇದು ನನ್ನ ಸಲಹೆ; ಅಲ್ಲದೆ ಹೆಬ್ಬಯಕೆ.

ಪುತ್ತೂರು
೧-೭-೪೨

ಲೀಲಾ. ಶಿ. ಕಾರಂತ

# ಕುಲದೀಪಕರು

ಲಲಿತ ಸಾಹಿತ್ಯಮಾಲೆಯ ಮುಂದಿನ ಪುಸ್ತಕ

೪, ೫, ೬ ನೆಯ ಕುಡಿಗಳು

೩೫೦ ಪುಟಗಳ ಒಂದೇ ಪುಸ್ತಕ

# 'ಸಾಹಿತ್ಯರತ್ನ'

ರಸಭರಿತವಾದ ಸರಸ ಕಾದಂಬರಿ

ಬರೆದವರು: ಅ. ನ. ಕೃಷ್ಣರಾಯರು

ಮಾರ್ಚ ೧೯೪೩ರಲ್ಲಿ ಪ್ರಕಟವಾಗುವದು.

# ಚಾರ್ಲ್ಸ್ ಆಂಡ್ರೂಸ್

## ೧

ಲಂಡನ್ ಪಾಲ್‌ಮಾಲ್‌ನ 'ಆರ್ಮಿ ಮತ್ತು ನೇವಿಕ್ಲಬ್' ಬಹಳ ಶಿಷ್ಟಸಂಪ್ರದಾಯದ ಸ್ಥಳ; ಬೆಂಗಳೂರಿನ ಸೆಂಚುರಿ ಕ್ಲಬ್ ಇದ್ದ ಹಾಗೆ. ಅಲ್ಲಿ ವೇಷಾಲಂಕಾರಕ್ಕೆ ಬಹಳ ಮರ್ಯಾದೆ. ಸರಿಯಾದ ಉಡಿಗೆ ತೊಡಿಗೆ ಇರದವರು ಅದರ ಎಡಬಲ ಕೂಡ ಹಾಯುವಂತಿಲ್ಲ. ಒಂದು ದಿನ ಅಲ್ಲಿಗೆ ಆಂಡ್ರೂಸರನ್ನು ಅಲ್ಪಾಹಾರಕ್ಕೆ ಕರೆದು ಅವರ ಪರಿಚಯ ಲಾಭವನ್ನು ಸರ್ ಗೋರ್‌ಡನ್–ದೊಡ್ಡ ಮನಸಿನ ಒಬ್ಬ ಬ್ರಿಟಿಷ್ ಗವರ್ನರ್–ಬಯಸಿದರು. ಆಂಡ್ರೂಸರ ಉಡಿಗೆ ತೊಡಿಗೆಗೆ ಇಲ್ಲಿ ಪ್ರವೇಶವೆ ಸಿಗಲಾರದು. ಬೇಡ ಎಂದು ಗೆಳೆಯರು ಅವರಿಗೆ ಹೇಳಿದರು. ಗೋರ್‌ಡನ್ ಅಜ್ಜ ಹಾಕಿದ ಆಲದ ಮರಕ್ಕೇ ನೇಣುಹಾಕಿಕೊಳ್ಳುವ ಜಾತಿಯಲ್ಲ. ಏನೂ ಅಡ್ಡಿಯಿಲ್ಲ ಎಂದರು. ಉಪಹಾರದ ಏರ್ಪಾಡಾಯಿತು. ಆ ಹೊತ್ತಿಗೆ ನಾಲ್ಕಾರು ಜನ ಅಲ್ಲಿದ್ದರು. ಬಾಗಿಲ ಆಳು ಬಂದು ಹೇಳಿದ: 'ಯಾರೋ ಒಬ್ಬ ಮನುಷ್ಯ ಬಂದಿದಾನೆ. ನಿಮ್ಮ ಹತ್ತಿರ ಏನೋ ಕೆಲಸ ಇದೆಯಂತೆ. ಹೊರಗೇ ಬಂದು ನೋಡಿ ಕಳಿಸಿದರಾದೀತು.' ಹೊರಗೆ ಬಂದು ನೋಡಿದರೆ ಆಂಡ್ರೂಸ್. ಭಿಕಾರಿಯ ಹಾಗೆ ಬಟ್ಟೆಬರೆ. ಹಾಗೆಯೇ ಬಂದುಬಿಟ್ಟಿದಾರೆ.

ಉಪಾಹಾರಕ್ಕೆ ಕೂತಾಗ ಸೇನೆ–ನೌಕಾದಳಗಳ ಪ್ರಧಾನಾಧಿಕಾರಿಗಳೆಲ್ಲ ಬಂದು ಹೋದರು. ಗವರ್ನರುಗಳು, ದಂಡನಾಯಕರು ಗೋರ್‌ಡನರನ್ನು ಕಾಣಲು ಬಂದರು. ಅವರಿಗೆಲ್ಲ ಆಂಡ್ರೂಸರ ಪರಿಚಯಮಾಡಿಕೊಟ್ಟರು ಗೋರ್‌ಡನ್. ಎಲ್ಲರೂ ಹೋದಮೇಲೆ ನಿಶ್ಯಬ್ದವಾದೊಂದು ಮೂಲೆಯಲ್ಲಿ ಮಾತುಕತೆಯಾಡುತ್ತ ಕುಳಿತರು. ಗೋರ್‌ಡನ್ ಬ್ರಿಟಿಷ್ ಗಯಾನಾ ಪ್ರಾಂತದ ಗವರ್ನರ್, ಎಂದರೆ ಮಂಡಲಾಧಿಪತಿ. ಆ ದೇಶಕ್ಕೆ ಬರಬೇಕೆಂದು ಆಂಡ್ರೂಸರನ್ನು ಕೇಳಿಕೊಂಡರು. ಎಲ್ಲ ಏರ್ಪಾಡಾಯಿತು. ಆಂಡ್ರೂಸ್ ಮನೆಗೆ ಹೋಗುವಾಗ ಮಂಡಲಾಧಿಪತಿ ಕ್ಲಬ್‌ನ ಹೊರಗೆ

ಬೀದಿಯತನಕ ಬಂದು ಅವರನ್ನು ಬಾಡಿಗೆ ಮೋಟಾರಿನಲ್ಲಿ ಕೂಡಿಸಿ ಕಳಿಸಿ ಕೊಟ್ಟರು. ಅವರ ಕಣ್ಣು ಗಾಡಿಯ ಕಡೆಗೇ ಇತ್ತು. ಗಾಡಿ ಕಾಣದಾಗುವ ವರೆಗೂ ತಲೆಬಾಗಿ ಹಾಗೆಯೇ ನೋಡುತ್ತ ನಿಂತಿದ್ದರು. ಕಣ್ಣು ಹನಿ ತುಂಬಿತ್ತು. ಒಂದು ಗಳಿಗೆ ಮಾತಾಡಲಿಲ್ಲ. ಆಮೇಲೆ ನಿಧಾನವಾಗಿ ಮೆದುವಾಗಿ ನುಡಿದರು: 'ಈದಿನ ಏಸುವೇ ನನ್ನ ಆತಿಥ್ಯ ಸ್ವೀಕರಿಸಿ ಅನುಗ್ರಹ ಮಾಡಿದಂತೆ ಅನಿಸುತ್ತದೆ ನನಗೆ.'

ಆಂಡ್ರೂಸರ ಪ್ರಭಾವ ಅಂಥದು. ಆ ಮೋರೆಯಲ್ಲಿ ಅಖಂಡ ಶಾಂತಿಯು ಸೆಲೆ ಚಿಮ್ಮುತ್ತಿತ್ತು. ಜಗತ್ತಿನ ಕರುಣೆಯೇ ಅವರ ಕಣ್ಣಾಗಿತ್ತು. ಯೇಸು ಅವರ ಬಾಳಬೆಳಕು. ಆ ಪ್ರಭುವೇ ಅವರ ಬಲ, ಅವರ ಸ್ಫೂರ್ತಿ. ಯೇಸು ಅವರನ್ನು ಕೈಹಿಡಿದು ನಡಿಸುತ್ತಿದ್ದಂತಿತ್ತು. ಗಾಂಧೀಜೀ ಹೇಳಿದಂತೆ ಆಂಡ್ರೂಸರಿಗಿಂತ 'ಉತ್ತಮ ಮನುಷ್ಯನಾಗಲಿ ಉತ್ತಮ ಕ್ರಿಸ್ತಾನನಾಗಲಿ' ಕಂಡಿಲ್ಲ.

ಅವರ ಸ್ವಭಾವ ಅಷ್ಟು ಮೆದುವು. ಮಾತು ಶಾಂತ, ಅಷ್ಟು ನಿಧಾನ. ನುಡಿಯೂ ಅಷ್ಟೆ–ಸವಿಜೇನು. ಕಂಡದ್ದನ್ನೇ ಆಡುವ ಸತ್ಯಪ್ರವೃತ್ತಿಯಾದರೂ ಸವಿಯಾಗಿಯೇ ನುಡಿವ ಶಮದಮ ಸಂಪತ್ತಿ ಅವರದು. ನೂರಾರು ಕಡೆ ಅಧಿಕಾರಿಗಳೊಡನೆ ತೀಕ್ಷ್ಣವಾಗಿ ಕಾದುವ ಸಂದರ್ಭ ಬಂದವು. ಸಾವಿರಾರು ಜನ ವಿದ್ಯಾರ್ಥಿಗಳನ್ನೂ ಕೆಲಸಗಾರರನ್ನೂ ದಾರಿಗೆ ತರುವ ಪ್ರಸಂಗ. ಆದರೂ ಆಂಡ್ರೂಸರ ಬಾಯಿಂದ ಒಂದು ಸಲವಾದರೂ ಕಹಿಯಾದ ಮಾತನ್ನು ಕೇಳಿದವರಿಲ್ಲ. ಕಹಿನುಡಿಯೇಕೆ, ಬೇಸರದ ನುಡಿಯೂ ಇಲ್ಲ. ದಣಿದಿರಲಿ, ನೊಂದಿರಲಿ ಸದಾ ಅದೇ ಮೆಲುನಗೆ, ಅದೇ ವಾತ್ಸಲ್ಯ. ಆ ಸವಿನುಡಿಗೆ ಜೊತೆಯಾಗಿ ಆ ಮಿದುಗಣ್ಣು! ತಂಗಾಳಿಗೆ ಬೆಳುದಿಂಗಳು ಜೊತೆಯಾದಂತೆ!

ಆ ಶಾಂತಿ–ಸೌಜನ್ಯ ಹೇಡಿತನದ ಸಪ್ಪೆ ಬದುಕಲ್ಲ. 'ಒಡಲೆಂಬ ಹುತ್ತಕ್ಕೆ ನುಡಿವ ನಾಲಗೆ ಸರ್ಪ;' ಅದಕ್ಕೆ 'ಸಮತೆಯೇ ಗಾರುಡಿಗ' ಎಂಬ ಅರಿವು ಅದರ ತಳಹದಿ. 'ಕೋಪವೆಂಬುದು ಪಾಪದ ನೆಲಗಟ್ಟು' ಎಂಬ ಅನುಭವ ಅದರ ಗುಟ್ಟು. ಸಿಟ್ಟಿಗೆ ಸಮಾಧಾನವೇ ಮದ್ದು ಎಂದು ಬೈಬಲಿ ನಲ್ಲಿ ಹೇಳಿದೆ. ಆಂಡ್ರೂಸರ ಬಾಳಿನಲ್ಲಿ ಹೆಜ್ಜೆಹೆಜ್ಜೆಗೂ ಆ ವಚನ ಅನುಭವ ವಾಗುತ್ತಿತ್ತು. ನಾಲಗೆಯ ಶುಚಿಗೆ ಮನಸಿನ ಶುಚಿ ಜೊತೆಯಾಗದಿದ್ದರೆ ಈ

ಶಾಂತಿ, ಸಮತೆ ಬರಿಯ ಕಪಟನಾಟಕವಾದೀತು. ಇಲ್ಲವೆ ಹೇಡಿತನ ವಾದೀತು. ನೋಯಿಸದಿದ್ದರೆ ಸಾಲದು, ನೋಯದೆಯೂ ಇರಬೇಕು. ನೊಂದವರು ನೋಯಿಸದಿರರು. ಗೀತೆಯಲ್ಲಿ ಬರುವ ಸಮತೆಯ ಲಕ್ಷಣ, ಬೈಬಲಿನಲ್ಲಿ ಬರುವ ಸದ್ಭಕ್ತನ ಲಕ್ಷಣ ಅದು. ರಾಗದ್ವೇಷಗಳನ್ನು ಪುಡಿಪುಡಿಮಾಡುವ ಮಹಾತಪಸ್ಸು. ಅದರ ಹಾದಿ ಅನಾಸಕ್ತಿ. ಆ ಹಾದಿ ಯೆಂದರೆ ಸತ್ಯದ ಹರಿತವಾದ ಕತ್ತಿಯ ಮೇಲೆ ನಡೆದಂತೆ. ಆಂಡ್ರೂಸರು ಆ ವ್ರತವನ್ನು ಪಾಲಿಸಿ ಇಂದ್ರಿಯವನ್ನು ಗೆದ್ದವರು. ಅಂತೇ ಅವರು ನೊಂದವರಲ್ಲ, ನೋಯಿಸಿದವರಲ್ಲ. ಈ ಮಹಾತಪಸ್ಸಿನಲ್ಲಿ ಅವರ ಕೈದೀಪ ವೆಂದರೆ ಪ್ರಾರ್ಥನೆ. ಆಂಡ್ರೂಸರ ಪ್ರಾರ್ಥನೆ ಅವರ ಬಾಳಿನಲ್ಲಿ ತುಂಬಿ ಕೊಂಡು ಬೆರೆತು ಹೋಗಿತ್ತು. ಅವರ ಅನಾಸಕ್ತಕರ್ಮವೇ ಅವರ ಮೂಕಪ್ರಾರ್ಥನೆ. ಅವರ ಬದುಕಿನ ಗಳಿಗೆ ಗಳಿಗೆಯಲ್ಲೂ ಉಪನಿಷತ್ತಿನ ಪ್ರಾರ್ಥನಾಮಂತ್ರ ಅವರ ಕಣ್ಣಿನಿಂದ ಹೊರಚಿಮ್ಮಿ ಹರಿಯುತ್ತಿತ್ತು—

ಅಸತೋ ಮಾ ಸದ್ಗಮಯ । ತಮಸೋ ಮಾ
ಜ್ಯೋತಿರ್ಗಮಯ । ಮೃತ್ಯೋರ್ಮಾऽಮೃತಂ ಗಮಯ ॥

ದಿನದಿನವೂ ಹತ್ತಾರು ಸಲ ಈ ಮಂತ್ರ ಅವರ ಬಾಯಲ್ಲಿ ಬರುತ್ತಿತ್ತು. ಇತರರು ಕಹಿ ನುಡಿದಾಗ, ಆಸೆಯ ದೀಪ ನಂದುವಂತಾದಾಗ, ಅವಮಾನ ವಾದಾಗ ಈ ಮಂತ್ರವೇ ಅವರ ಊರೆಗೋಲು, ಅವರ ಪ್ರಸನ್ನ ಕವಚ.

ಈ ತರದ ಪರೀಕ್ಷೆ ಅವರ ಬಾಳಿನಲ್ಲಿ ಪದೇಪದೇ ಬರುತ್ತಿತ್ತು. ಆಂಡ್ರೂಸರದು ಕವಿಜೀವ, ರಸಜೀವ. ಅಸತ್ಯ–ವಿರೂಪ ಅದಕ್ಕೆ ಆಗದು. ಹಿಂಸೆ, ನಿರ್ದಯೆ ಆ ಜೀವದ ಕೆಚ್ಚನ್ನು ಕುಸ್ತಿಗೆ ಕರೆದ ಸಡ್ಡಿದ್ದಂತೆ. ದೇವರ ಮನೆ ಈ ಜಗತ್ತು. ಇದರಲ್ಲಿ ಯಾರೂ ಯಾರಿಗೂ ಅನ್ಯಾಯ ಮಾಡಬಾರದು. ಹಿಂಸೆ, ಪೀಡೆ ಸಲ್ಲದು. ಸಲ್ಲದುದು ನಡೆದರೆ ಸತ್ಯದ ಪೂಜಾರಿ ನೋಡಿ ಸುಮ್ಮನಿರಲಾಗದು. ಅಸತ್ಯ, ಹಿಂಸೆ, ಭೇದಗಳನ್ನು ಇದುರಿಸಬೇಕು. 'ದೇವರ ರಾಜ್ಯ' ಇಲ್ಲಿ ನೆಲಸಬೇಕು; ಧರ್ಮಸಂಸ್ಥಾಪನೆಯಾಗಬೇಕು. ಇದು ಮಾನವನು ಮಾಡಬೇಕಾದ ಕೆಲಸ. ಯೇಸು ತೋರಿಸಿದ ದಾರಿ. ಈ ತರದ ಬದುಕಿಗೆ ಜಗತ್ತಿನೊಡನೆ ಕಾದಬೇಕಾಗಿ ಬರುವ ಸಂದರ್ಭ ಸಾವಿರ; ಹುಲಿ ಮೇಕೆಗಳ ನಡುವೆ ನುಗ್ಗಿ ಪ್ರಾಣವನ್ನೇ ಒಪ್ಪಿಸಬೇಕಾದ ಪ್ರಸಂಗ

ಹಲವು. ಯೇಸು ತನ್ನ ಭಕ್ತರಿಗೆ ನೀಡಿದ್ದು ' ಕಂಟಕ ಕಿರೀಟ ', ' ಶಿಲುಬೆ. ' ಆಂಡ್ರೂಸರ ಪಾಲಿಗೆ ಇಂಥ ಪರೀಕ್ಷೆ ಕೊನೆತನಕವೂ ಇತ್ತು. ಇವರು ತೀರ ಹಿಂದುಸ್ತಾನೀ ಜನರಂತೆ ನಡೆದುದು ಬಿಳಿಯ ಸಾಹೇಬರಿಗೆ ಸೇರುತ್ತಿರಲಿಲ್ಲ. ವಿಚಾರದಲ್ಲಂತೂ ಅವರಿಗೂ ಇವರಿಗೂ ನೆಲ ಮುಗಿಲಿನ ಅಂತರ. ಎಷ್ಟೋ ಸಲ ' ಶುದ್ಧ ಆಂಗ್ಲೇಯ'ರ ಗುಂಪಿನಲ್ಲಿ ಇವರಿಗೆ ಮನ್ನಣೆ ದೊರೆಯುತ್ತಿರಲಿಲ್ಲ. ಕೆಲಮಟ್ಟಿಗೆ ಆ ಗುಂಪಿನಲ್ಲಿ ಇವರಿಗೆ ಬಹಿಷ್ಕಾರವೇ ಇತ್ತು. ತಾವೇ ಬುದ್ಧಿವಂತರೆಂದು ತಿಳಿದುಕೊಂಡ ಜನ ಇವರನ್ನು ನೋಡಿ ನಗುತ್ತಿದ್ದರು. ' ಬರೀ ಹುಚ್ಚ ' ಎನ್ನುತ್ತಿದ್ದರು. ಯೇಸುವೇ ಮತ್ತೆ ಅವತರಿಸಿ ಬಂದರೂ ಹುಚ್ಚ ಎಂದು ಬಯ್ದು ಓಡಿಸುವ ಜನ, — ಆಂಡ್ರೂಸರ ವಿನಯಮಾರ್ದವಗಳು ಅವರಿಗೆ ಅರ್ಥವಾದಾವೇ ? ಆದರೆ ಆಂಡ್ರೂಸರಿಗೆ ಹಿಗ್ಗಿಲ್ಲ ಕುಗ್ಗಿಲ್ಲ; ಅವರಿಗೆ ಗೊತ್ತಿದ್ದುದು ಕರ್ತವ್ಯಪಾಲನೆ, ಸೇವೆ ಅಷ್ಟೆ.

ಈ ಸೇವಾಸಕ್ತಿಗೆ ಹಿರಿದು ಕಿರಿದೆಂಬ ಭೇದವಿರಲಿಲ್ಲ. ಎಂಥ ಕೆಲಸವಾದರೂ ಸರಿ, ಯಾವ ಮನುಷ್ಯನಾದರೂ ಸರಿ. ವೈಸರಾಯ್‌ನ ಬಳಿಗೋ, ಆಫ್ರಿಕಾದ ಜನರಲ್ ಸ್ಮಟ್ಸ್ ಬಳಿಗೋ ಗಾಂಧೀಜಿಯ ದೂತರಾಗಿ ಕಾಗದಗಳನ್ನು ತೆಗೆದುಕೊಂಡಿದಾರೆ. ಕವಿ ರವೀಂದ್ರರ ಮನಸ್ಸನ್ನು ತಿಳಿಸಲು ಅಧಿಕಾರಿಗಳ ಮನೆಬಾಗಿಲಿಗೆ ತಿರುಗಾಡಿದಾರೆ. ಇತರರ ಕೈಯಲ್ಲಿ ಹುಡಿ ಹುಡಿಯಾಗಿ ಹೋಗಬಹುದಾಗಿದ್ದ ಸೂಕ್ಷ್ಮಸಂಧಾನಗಳೆಷ್ಟೋ ಅವರ ಕೈವಾಡದಿಂದ ಅರಳಿ ಹೂವಾಗಿವೆ. ಆಫ್ರಿಕಾದ ಭಾರತೀಯರ ಹೋರಾಟದಲ್ಲಿ ಕೇಪ್‌ಟೌನಿನ ಮುಖ್ಯ ವರ್ತಮಾನಪತ್ರವೊಂದು ನಮ್ಮವರಿಗೆ ಪೂರಾ ವಿರೋಧಿಯಾಗಿತ್ತು. ಭಾರತೀಯರ ಪರವಾಗಿ ಆಂಡ್ರೂಸರು ಆ ಸಂಪಾದಕರೊಡನೆ ದಿನವೂ ಚರ್ಚೆಮಾಡಿ, ಕೊನೆಗೆ ಅವರ ವಿರೋಧವನ್ನು ಗೆದ್ದರು. ಜನರಲ್ ಸ್ಮಟ್ಸ್ ಆಗ ಆಫ್ರಿಕಾ ಸರಕಾರದ ನಾಯಕ. ಗಾಂಧೀಜಿಗೂ ಆತನಿಗೂ ಒಪ್ಪಂದ ಕುದುರಿಸಲು ಆಂಡ್ರೂಸರು ಮಾಡಿದ ಪ್ರಯತ್ನ ಭಗೀರಥ ಪ್ರಯತ್ನ. ಸ್ಮಟ್ಸ್ ಬೇಸರಗೊಂಡಿದ್ದನು. ಇವರಿಗೆ ಬೇಸರವಿಲ್ಲ. ಒಪ್ಪಂದ ಕುದುರಿ ನಾಳೆ ರುಜುಗಳಾಗಬೇಕೆನ್ನುವಾಗ ಕಸ್ತೂರಬಾಗೆ ಬಹಳ ಕಾಯಿಲೆ ಎಂದು ತಂತಿ ಬಂತು. ಆದರೆ ಒಪ್ಪಂದ ಪೂರಾ ರುಜುವಾಗುವ ತನಕ ಹೋಗುವುದಿಲ್ಲವೆಂದು ಗಾಂಧೀಜೀ ಹಟ ಹಿಡಿದರು. ಪಾಪ, ಆಂಡ್ರೂಸರಿಗೆ

ಮನಸು ನಿಲ್ಲಲಿಲ್ಲ. ಕೂಡಲೆ ಸ್ಮಟ್ಸ್‌ನ ಬಳಿಗೆ ಓಡಿದರು. ಹನಿಗಣ್ಣಿನಿಂದ ಸುದ್ದಿಯನ್ನು ತಿಳಿಸಿ, ನಾಳೆ ಬೇಡ—ಈಗ ಆಗಲಿ, ಈ ಗಳಿಗೆಯಲ್ಲಿ ಆಗಲಿ ಎಂದು ಸೂಚಿಸಿದರು. ಕಸ್ತೂರಬಾ ಸಾಯುತಿದಾಳೆ; ರಾಜಕೀಯವಾದರೆ ತಾನೆ ದಯಾಧರ್ಮ ಬೇಡವೇ? ಎಂದು ಅಂಗಲಾಚಿದರು. ಸ್ಮಟ್ಸ್ ಕೂಡ ಒಳ್ಳೇ ಜೀವಿ. ಇವರದು ಒಲವಿನ ಹೊನಲ ನೆಗಸು. ಒಡನೆಯೆ ಒಪ್ಪಂದ ವಾಯಿತು. ಗಾಂಧೀಜೀ ಆಂಡ್ರೂಸ್, ಇಬ್ಬರೂ ಕಸ್ತೂರಬಾನನ್ನು ನೋಡಲು ಹೊರಟರು.

ಗಾಂಧೀಜೀ ಚಕ್ರಗೋಷ್ಠಿಗೆ ಹೋಗಿದ್ದಾಗ ಆಂಡ್ರೂಸರು ಇಂಗ್ಲಂಡಿನಲ್ಲೇ ಇದ್ದರು. ಹೇಗಾದರೂ ಒಂದು ನಿರ್ಣಯಕ್ಕೆ ಬಂದು ಮುಟ್ಟಲಿ ಆ ಪರಿಷತ್ತು ಎಂದು ಅವರು ಮಾಡಿದ ಪ್ರಯತ್ನ ಇನ್ನೂ ಸಾಕಷ್ಟು ಬೆಳಕಿಗೆ ಬಂದಿಲ್ಲ. ಅವರ ಬಾಳೇ ಹಾಗೆ. ಮಣ್ಣಿನಡಿಯಲ್ಲಿ ಹುದುಗಿಕೊಂಡ ಬೀಜದಂತೆ ಅವರ ಕೆಲಸ. ಗಾಂಧೀಜೀ ಕಿಂಗ್‌ಸ್ಲೆ ಹಾಲಿನಲ್ಲಿ ಮ್ಯೂರಿಯೆಲ್ ಲೆಸ್ಟರಳ ಅತಿಥಿಯಾಗಿ ನಿಂತದ್ದಕ್ಕೆ ಆಂಡ್ರೂಸ್ ಕಾರಣ. ಗಾಂಧೀಜೀಯ ಮನಸ್ಸು ಇಂಗ್ಲೆಂಡಿನ ಜನಕ್ಕೆ ತಿಳಿಯಲಿ, ಇವರ ಗುಣದ ವೈಭವ ಅವರಿಗೆ ಅರ್ಥವಾಗಲಿ ಎಂದು ಅವರು ಪಟ್ಟ ಪಾಡು ಅಷ್ಟಿಷ್ಟಲ್ಲ. ಎಲ್ಲ ತರದ ಜನರಲ್ಲಿಯೂ ಗಾಂಧೀಜೀ ಬೆರೆಯುವಂತೆ ಮಾಡಿದರು. ಮ್ಯಾಂಚೆಸ್ಟರಿನ ಕೂಲಿಕಾರರ ನಡುವೆ ಕೂಡ ಗಾಂಧೀಜೀ ಹೋಗಿ ಇದ್ದು ಬಂದರು. ಇತ್ತ ಹೀಗೆ ಓಡಾಟ, ಅತ್ತ ಸ್ಮಟ್ಸ್, ಮ್ಯಾಕ್ಡೊನಲ್ಡ್, ಇರ್ವಿನ್‌ರ ಬಳಿ ದೌತ್ಯ, ಸಾಲದ್ದಕ್ಕೆ ಚಕ್ರವರ್ತಿಯ ವರೆಗೆ ಸಂಧಾನ ಪ್ರಯತ್ನ. ಹರಿಜನ ಸಮಸ್ಯೆಗಾಗಿ ಗಾಂಧೀಜೀ ತಮ್ಮ ಪ್ರಾಣವನ್ನೇ ಒಡ್ಡಿ ಪ್ರಾಯೋಪವೇಶ ಮಾಡಿದಾಗ (೧೯೩೨) ಇಂಗ್ಲೆಂಡಿನಲ್ಲಿ ಪ್ರಧಾನ ಮ್ಯಾಕ್ಡೊನಲ್ಡ್, ಸರ್ ಸಾಮ್ಯುಅಲ್ ಹೋರ್, ಲಾರ್ಡ ಇರ್ವಿನ್‌ರ ಸುತ್ತ ನಕ್ಷತ್ರಕನಂತೆ ಸುಳಿದಾಡಿದರು. ಬ್ರಿಟಿಷ್ ಸರಕಾರಕ್ಕೆ ಈ ವಿನಯದ ಮಂತ್ರ ತೀರಾ ಹೊಸದು. ಪ್ರಧಾನಿ ಗಾಂಧೀಜಿಯ ಅಭಿಮತಕ್ಕೆ ತಲೆಬಾಗಬೇಕಾಯಿತು. ಯರವಡಾ ಉಪವಾಸದ ಸಂದರ್ಭದಲ್ಲಿ (೧೯೩೩), ರಾಜಕೋಟೆಯ ಪ್ರಾಯೋಪವೇಶ ಪ್ರಕರಣದಲ್ಲಿ ಆಂಡ್ರೂಸರು ತೆರೆಯಮರೆಯಲ್ಲಿ ನಿಂತೇ ತಮ್ಮ ಪ್ರಭಾವ ಬೀರಿದರು. ೧೯೩೩ರಲ್ಲಂತೂ ಗಾಂಧೀಜಿಯನ್ನು ಸೆರೆಮನೆಯಿಂದ ಬಿಡಿಸುವತನಕ

ಆಂಡ್ರೂಸರಿಗೆ ನಿದ್ದೆಯಿಲ್ಲ. ಅನ್ನವಿಲ್ಲ. ಒಮ್ಮೆ ಗೃಹಮಂತ್ರಿ ಮ್ಯಾಕ್ಸ್‌ವೆಲ್ ಒಮ್ಮೆ ವೈಸ್‌ರಾಯ್; ಆ ಅಲೆದಾಟಕ್ಕೆ ಮಿತಿಯೇ ಇಲ್ಲ.

ಗಾಂಧೀಜೀಯ ವಿಷಯವಾಗಿಯೇ ಅಲ್ಲ; ಯಾರಾದರೂ ಸರಿಯೆ, ದುಃಖದಲ್ಲಿದ್ದರೆ ಅವರ ನೆರವಿಗೆ ಆಂಡ್ರೂಸರು ಸಿದ್ಧ. ತಮ್ಮನ್ನು ತಿರಸ್ಕರಿಸಿದವರಿಗೂ ಇವರ ಸಹಾಯ ಮುಟ್ಟಬೇಕು. ಅವರ ಔದಾರ್ಯ ತುಂಬು ಹೃದಯದ್ದು. ಸದಾ ತುಳುಕಿ ಚೆಲ್ಲಾಡುತ್ತಿದ್ದ ಆ ಒಲವಿನ ಹೊನಲಿನಲ್ಲಿ ಮೀಯದವರೇ ವಿರಳ. ನೂರಾರು ಜನ ತರುಣರು ಅವರ ಸಹಾಯದಿಂದ ವಿದ್ಯಾವಂತರಾಗಿದ್ದಾರೆ. ಜಲಿಯನ್‌ವಾಲಾ ದುರಂತ ಪ್ರಕರಣ ನಡೆದಾಗ ಲಾಹೋರ್ ಕಾಲೇಜಿನ ಅಧಿಕಾರಿಗಳು ವಿದ್ಯಾರ್ಥಿಗಳಿಗೆ ಕೊಟ್ಟ ಹಿಂಸೆಯನ್ನು ಇದುರಿಸಲು ನಾಯಕರು ಯಾರೂ ನಿಲ್ಲಲಿಲ್ಲ. ತರಗತಿಗೆ ಇಷ್ಟು ಮಂದಿ ಎಂದು ಕೈಗೆ ಸಿಕ್ಕ ಹುಡುಗರನ್ನು ಕಾಲೇಜಿನಿಂದ ಹೊರಗೆ ದಬ್ಬಿದ್ದರು. ಆ ಹೊತ್ತಿನಲ್ಲಿ ಆಂಡ್ರೂಸರು ಬಂದು ವಿದ್ಯಾರ್ಥಿಗಳಿಗೆ ನಾಯಕರಾಗಿ ನಿಲ್ಲದಿದ್ದರೆ ಇನ್ನೂ ಏನೇನು ಆಗಬೇಕಾಗಿತ್ತೋ! ಕಾಲೇಜಿನ ಅಧಿಕಾರಿ ಇಂಗ್ಲಿಷರವನು, ಸಂದರ್ಭ ಸರಕಾರದ ಗೌರವ ಉಳಿಸುವ ಪ್ರಯತ್ನ. ಆದರೂ ಆಂಡ್ರೂಸರು ಹಿಂದೆಮುಂದೆ ನೋಡಲಿಲ್ಲ. ಇದರಿಂದ ತಮಗೇ ತೊಂದರೆಯಾದೀತೆಂಬ ವಿಚಾರ ಅವರಿಗೆ ಬರುತ್ತಲೇ ಇರಲಿಲ್ಲ.

ಎಷ್ಟೋ ಸಲ ಸಂಜೆಗೆ ಹೊರಗೆ ಹೋದವರು ಆಂಡ್ರೂಸರು ತಿರುಗಿ ಬಂದಾಗ ಅವರ ಮೈಮೇಲೆ ಅಂಗಿ ಮಾಯವಾಗಿರುತ್ತಿತ್ತಂತೆ. ಯಾರಾದರೂ ಬಡವರು ದಾರಿಯಲ್ಲಿ ಇವರನ್ನು ಕಂಡರಾಯ್ತು, ಅವರ ಪುಣ್ಯ ಫಲಿಸಿದಂತೆಯೆ. ಅವರಿಗೆ ತಮ್ಮ ಅಂಗಿಯನ್ನು ಕೊಡುತ್ತಿದ್ದರು. ಎಷ್ಟೋ ಸಲ ಇಂಥ ಸ್ಥಿತಿಯಲ್ಲಿ ಮಳೆಯಲ್ಲಿ ತೊಯ್ದು ಮನೆಗೆ ಬಂದಿದ್ದಾರೆ. ಹಣದ ವಿಷಯದಲ್ಲಂತೂ ಆಂಡ್ರೂಸರದು ವಿಲಕ್ಷಣವಾದ ಅಸಂಗ್ರಹವೃತ್ತಿ. ತಮಗಾಗಿ ಯಾರಾದರೂ ಹಣ ಕೊಟ್ಟಿದ್ದರೆ, ಇವರು ಮತ್ತಾರಿಗಾದರೂ ಕೊಟ್ಟುಬಿಡುತ್ತಿದ್ದರು. ತಮಗಿಂತ ಅವರ ಅವಶ್ಯಕತೆ ಹೆಚ್ಚು; ಅವರಿಗೆ ಮೊದಲು ಆ ಹಣ ಸಲ್ಲಬೇಕು. ವರ್ಧಾಕ್ಕೆ ಹೊರಡಬೇಕೆಂದು ಒಂದು ದಿನ ಕಲಕತ್ತೆಯಲ್ಲಿ ನಿಲುಮನೆಗೆ ಬಂದರು, ಅಲ್ಲಿ ಇವರ ಗುರುತಿನ ತರುಣ ಒಬ್ಬ ಸಿಕ್ಕ.

ಅವನದು ದೂರ ಪ್ರಾಂತ. ತಾನು ಬಹಳ ತೊಂದರೆಯಲ್ಲಿರುವುದಾಗಿಯೂ ತನಗೆ ಗಾಡಿಯ ವೆಚ್ಚಕ್ಕೆ ಹಣಬೇಕೆಂದೂ, ಸಹಾಯ ಮಾಡಬೇಕೆಂದೂ ಅವನು ಕೇಳಿಕೊಂಡ. ಆಂಡ್ರೂಸರು ತಮ್ಮ ಕೈಯಲ್ಲಿದ್ದ ಹಣವನ್ನು ಅವನಿಗೆ ಕೊಟ್ಟು ತಾವು ಮನೆಗೆ ಹಿಂತಿರುಗಿ ಬಂದರು. ಮಾರನೆಯ ದಿನ ಅವರ ಗೆಳೆಯ ನಿಲುಮನೆಗೆ ಬಂದು ತಿಕೀಟೇ ತೆಗೆದುಕೊಟ್ಟು ಹೋದನಂತೆ.

ಆಂಡ್ರೂಸರ ಜೊತೆಗಾತಿ ಅಗಾಥಾ ಹ್ಯಾರಿಸನ್; ಇವರು ಇಂಗ್ಲೆಂಡಿಗೆ ಹೋದಾಗ ಆಕೆ ಇವರ ಕಾರ್ಯದರ್ಶಿಯಾಗಿ ಕೆಲಸಮಾಡುವ ರೂಢಿ. ಆಕೆ ಸೇವಾಗ್ರಾಮಕ್ಕೆ ಬಂದಾಗ ಹೇಳುತ್ತಿದ್ದಳು— "ಇಂಗ್ಲೆಂಡಕ್ಕೆ ಚಾರ್ಲಿ ಬಂದ ಕೂಡಲೆ ನಮಗೆ ಮೊದಲನೆ ಕೆಲಸವೆಂದರೆ ಇವರ ಜೇಬುಗಳನ್ನು ಹುಡುಕು ವುದು. ದೂರದ ಗೆಳೆಯರು ಕಳಿಸಿದ್ದ ಕಾಗದಪತ್ರ ಹಾಗೆಯೆ ಬಿಟ್ಟರೆ ಅಗಸರ ಮನೆಗೇ ಹೋಗಿಬಿಟ್ಟಾವು ಎಂಬ ಹೆದರಿಕೆ ನಮಗೆ. ನಿಜವಾಗಿ ಚಾರ್ಲಿ ಹಸುಮಗುವಿದ್ದಂತೆ. ಯಾರಾದರೂ ತಾಯಿಹಾಗೆ ನೋಡಿಕೊಳ್ಳಬೇಕು. ಇಲ್ಲದಿದ್ದರೆ ಎಲ್ಲಾ ತಲೆಕೆಳಗೇ." ಆಂಡ್ರೂಸರ ಸ್ವಭಾವವೇ ಹಾಗೆ. ಅಸಂಗ್ರಹವೇ ಧರ್ಮ, ಸಂಗ್ರಹ ಅಧರ್ಮ ಎಂದಿದಾನೆ ಯೇಸು. ಕೈಗೆ ಕೋಲು, ಮೈಗೆ ಕಂಬಳಿ, ಕಾಲಿಗೆ ಕೆರ—ಯಾವುದೂ ಬೇಡವೆಂದಿದ್ದಾನೆ. ಆಂಡ್ರೂಸರು ಆ ಹಾದಿಯನ್ನೇ ಹಿಡಿದಿದ್ದರು. ಪುಣೆಯಲ್ಲಿ ಗಾಂಧೀಜೀ ಕಾಯಿಲೆ ಮಲಗಿದ್ದಾಗೊಮ್ಮೆ ಆಂಡ್ರೂಸರ ಕೈಗೆ ಗಾಂಧೀಜಿಯ ಕಾರ್ಯದರ್ಶಿ ಪ್ಯಾರೆಲಾಲ್ ಹತ್ತು ರೂಪಾಯಿ ನೋಟು ಕೊಟ್ಟರಂತೆ ಟಾಂಗಾದವನಿಗೆ ಕೊಡಲು. ಸಂಜೆಗೆ ಆಂಡ್ರೂಸರು ತಿರುಗಿ ಬಂದಾಗ ಆ ಟಾಂಗಾದವನಿಗೆ ಹಣಕೊಡಲು ಪ್ಯಾರೆಲಾಲಜೀಗೆ ಹೇಳಿದರು. ಆ ಹತ್ತು ರೂಪಾಯಿ ನೋಟು ಅವರ ಜೇಬಿನಿಂದ ಯಾವಾಗಲೋ ಮಾಯವಾಗಿತ್ತು. ಗಾಂಧೀಜೀ ಲೆಕ್ಕದಲ್ಲಿ ಬಹಳ ಸೂಕ್ಷ್ಮ. ಪ್ಯಾರೆಲಾಲಜೀ ಲೆಕ್ಕ ಒಪ್ಪಿಸುವಾಗ ಈ ಮಾತು ಹೇಳಿದರು— "ನಿನಗೆ ಬುದ್ಧಿಯಿರಲಿಲ್ಲವೇ? ಅಷ್ಟು ಗೊತ್ತಿಲ್ಲವೇ, ಚಾರ್ಲಿ ಕೈಗೆ ಹಣ ಕೊಟ್ಟುವರುಂಟೆ? ಕಳೆದು ಹೋಗದಿದ್ದರೆ ತಾನೆ, ಇದುರಿಗೆ ಬಂದ ಭಿಕ್ಷುಕನಿಗೆ ಕೊಡದೆ ಇರುವ ಜೀವವೆ ಆತನದು? ಆತನ ಕೈಗೆ ಹಣ ಕೊಟ್ಟರೂ ಒಂದೇ, ಮಗುವಿನ ಕೈಗೆ ನೋಟು ಕೊಟ್ಟರೂ ಒಂದೇ" ಎಂದು ಬೈದರಂತೆ ಗಾಂಧೀಜೀ.

ಬಡವರ ವಿಷಯದಲ್ಲಿ ಆಂಡ್ರೂಸರದು ಅಷ್ಟು ಕನಿಕರ, ಅಷ್ಟು ಮೆದುವು. ಪ್ರೀತಿಯೆಂದರೂ ಸರಿ. ಬಡವರ ಗೋಳು ನೋಡಿ ಅವರು ಕರಗಿ ಹೋಗುತ್ತಿದ್ದರು. ಒರಿಸ್ಸಾ ಪ್ರಾಂತದಲ್ಲಿ ಮಹಾನದಿಯ ನೆಗಸು ಬಂದು ಸೀಮೆ ನೀರಲ್ಲಿ ಮುಳುಗಿದರೆ ಮನೆಮಾರು ಕಳೆದುಕೊಂಡ ಆ ಜನರಿಗೆ ಅನ್ನಬಟ್ಟೆ, ಇರಲು ನೆರಳು ಒದಗಿಸಲು ಆಂಡ್ರೂಸರು ಸಿದ್ಧ. ಗೋಪಬಂಧು ದಾಸರ ಜೊತೆಯಲ್ಲಿ ಮಳೆಯೆನ್ನದೆ, ಜ್ವರವೆನ್ನದೆ, ಆ ಜಲಪ್ರಳಯದಲ್ಲಿ ತಿರುಗಾಡುತ್ತಿದ್ದ ದಿನದ ಚಿತ್ರ, ಇರುಳು ನೆಲೆಯಿಲ್ಲದೆ ಹುಲ್ಲಿನ ಬಣವೆಗಳಲ್ಲಿ ಮಲಗುತ್ತಿದ್ದ ಚಿತ್ರ ಆಂಡ್ರೂಸರೇ ವರ್ಣಿಸಿದ್ದಾರೆ. ಕ್ವೆಟ್ಟಾದಲ್ಲಿ, ಬಿಹಾರಿನಲ್ಲಿ ಭೂಕಂಪವಾದಾಗ ಆಂಡ್ರೂಸರು ಹೆಗಲಿಗೆ ಚೀಲ ಸಿಗಿಸಿಕೊಂಡು ಅಲ್ಲಿಗೆ ನಡೆದರು. ಯಾವ ಪ್ರಾಂತದಲ್ಲಾದರೂ ಬರಗಾಲವಿದ್ದರೆ ಅಲ್ಲಿ ಇವರ ಹೆಜ್ಜೆ ಬೀಳಬೇಕು. ಒರಿಸ್ಸಾದ ಭೀಕರ ಬಡತನವಂತೂ ಅವರ ಕಣ್ಣಿಗೆ ಕಟ್ಟಿದಂತಿತ್ತು. ಇಷ್ಟೆಲ್ಲ ಮಾಡಿಯೂ ಅವರು ಬಿರುದಿನ ಏಣಿಯನ್ನು ಹತ್ತುವ ಗೊಡವೆಗೆ ಹೋಗಲಿಲ್ಲ. ತಾವು ಮಾಡಿದುದು ಸೇವೆ, ಯೇಸುವಿನ ಶುಶ್ರೂಷೆ ಎಂಬ ಮನೋಭಾವ ಅವರದು. ಹೆಮ್ಮೆಗೆ ಅವರ ಸುತ್ತ ಗಾವುದ ದೂರ ದೊಳಗೆ ಬರುವ ಎಡೆಯಿರಲಿಲ್ಲ.

ಆಂಡ್ರೂಸರನ್ನು ಹಿಂದುಸ್ಥಾನ 'ದೀನಬಂಧು' ಎಂದು ಕರೆಯಿತು. ನಮ್ಮ ದೇಶದಲ್ಲಿ ಅಷ್ಟು ಅನ್ವರ್ಥವಾದ ಬಿರುದು ಮತ್ತೊಂದಿಲ್ಲ. ಆಂಡ್ರೂಸ್ ನಿಜವಾಗಿಯೂ ದೀನಬಂಧು, ಬಡವರೆ ಅವರ ಜಗತ್ತು. Lowliest and the lost—ದೀನರು, ಪತಿತರು ನನ್ನವರು ಎಂದಿದಾನೆ ಯೇಸು. ಆಂಡ್ರೂಸರೂ ಅದನ್ನೇ ನಂಬಿದ ಮಹಾಜೀವ. ಅವರ ಈ ಮನೋವೃತ್ತಿಯೇ ಅವರನ್ನು ದಕ್ಷಿಣ ಆಫ್ರಿಕಾದ ಸತ್ಯಾಗ್ರಹದ ಕಡೆ ಸೆಳೆದದ್ದು. ಇವರ ಹೃದಯ ಪರಿಪಾಕ ಗೋಪಾಲ ಕೃಷ್ಣ 'ಗೋಖಲೆಗೆ ಗೊತ್ತಿತ್ತು. ದಕ್ಷಿಣ ಆಫ್ರಿಕಾದ ಭಾರತೀಯರ ಕಷ್ಟವನ್ನು ದೂರಮಾಡಲು ಬನ್ನಿ ಎಂದು ಇವರನ್ನೂ ಕರೆದರು. ಆಂಡ್ರೂಸರಿಗೆ ಇದಕ್ಕಿಂತ ಹರುಷದ ಕೆಲಸವುಂಟೇ? ಅಲ್ಲಿ ಗಾಂಧೀಜೀಗೆ ನಾನಾ ವಿಧದಲ್ಲಿ ನೆರವಾದರು. ಅಲ್ಲಿ ಮೊಳೆದ ಗೆಳೆತನವೇ ಮುಂದೆ ದೃಢ ಪ್ರೇಮವಾಗಿ ಪರಿಣಮಿಸಿತು.

ಆಂಡ್ರೂಸರ ಈ ಸ್ವಭಾವ, ಈ ಸೇವಾಸಕ್ತಿ ಅವರನ್ನು ಪ್ರಪಂಚದ ಮೂಲೆಮೂಲೆಗೂ ಎಳೆದೊಯ್ಯಿತು. ಕೆನ್ಯಾ, ಫಿಜಿ, ತಂಗನಾಯ್ಕ, ಟ್ರಿನಿಡಾಡ್, ನ್ಯೂಜಿಲೆಂಡ್‌ಗಳಿಗೆ ಆ ದೇಶಗಳ ಬಡಜನಕ್ಕಾಗಿ ಹೊಡೆದಾಡಲು ಹೋದರು. ಬ್ರಿಟಿಷ್ ಗಯಾನಾಕ್ಕೂ ಹೋಗಿ ಬಂದರು. ಆದರೆ ಪ್ರಪಂಚ ದಲ್ಲಿ ಬಡತನದ ಸಮಸ್ಯೆ ಸಾವಿರ ತಲೆಯ ರಾಕ್ಷಸ. ಸಾಲದುದಕ್ಕೆ ಅಹಿರಾವಣನಂತೆ ಕಡಿದಷ್ಟೂ ಬೆಳೆಯುವ ಜಾತಿ. ದೀನಬಂಧುವಿನಂಥವರೆಷ್ಟು ಜನರ ತಪಸ್ಸು ಬೇಕೋ ಆ ರಾಕ್ಷಸನ ನಿಗ್ರಹಕ್ಕೆ.

ಅಂತರಂಗ ಜೀವನದಲ್ಲಿಯೂ ಬಡವರ ವಿಷಯದಲ್ಲಿ ಅವರದು ಬಹಳ ಮಾರ್ದವ. ೧೯೨೪ರಲ್ಲಿ ಗಾಂಧೀಜೀ ಹಿಂದೂ ಮುಸ್ಲಿಮ್ ಐಕ್ಯಕ್ಕಾಗಿ ೨೧ ದಿನದ ಉಪವಾಸವನ್ನು ಮಾಡಿದರಷ್ಟೇ. ಗಾಂಧೀಜೀಯ ದರ್ಶನಕ್ಕಾಗಿ ಜನ ಹಂಬಲಿಸುತ್ತಿದ್ದರು. ಆದರೆ ಅವಕಾಶ ಮಾತ್ರ ದುರ್ಲಭವಾಗಿತ್ತು. ಆಂಡ್ರೂಸರು ಗಾಂಧೀಜೀಗೆ ಹೇಳಿ ಒಂದು ದಿನ ದರ್ಶನಕ್ಕೆಂದು ಒಬ್ಬ ವ್ಯಕ್ತಿಯನ್ನು ತಾವೇ ಕರೆದುಕೊಂಡು ಬಂದರು. ಆಗ ಗಾಂಧೀಜೀ ಇದ್ದದ್ದು 'ದಿಲ್‌ಕುಷ್' ಬಂಗಲೆಯಲ್ಲಿ. ಇವರು ಕರೆತಂದ ಮನುಷ್ಯ ಆ ಬಂಗಲೆಯ ಭಂಗಿ. ಅವನು ಈ ಯುಗಪುರುಷನನ್ನು ನೋಡಿ ತಣಿಯಲಿ ಎಂದು ಇವರ ಆಸೆ. ತಮಗೇ ಕಾಯಿಲೆಯಾಗಿದ್ದಾಗ ಆಸ್ಪತ್ರೆಯಲ್ಲಿ ತಮ್ಮ ಕೋಣೆಯ ಕಸಬಳಿವ ಹುಡುಗನ ಯೋಗಕ್ಷೇಮದಲ್ಲಿ ಅವರಿಗಿದ್ದ ಆಸಕ್ತಿಯನ್ನು ನೋಡಿದ ವರು ವರ್ಣಿಸಿದಾರೆ. ತಮಗೆ ಆರೈಕೆ ಮಾಡುತಿದ್ದ ವೈದ್ಯರೊಬ್ಬರಿಗೆ ಗಾಂಧೀಜೀಯ ಚಿತ್ರವೊಂದನ್ನು—ಅವರ ಸ್ವಹಸ್ತಾಕ್ಷರದಿಂದ ರುಜು ಹಾಕಿಸಿ-ಕೊಡುವುದಾಗಿ ಹೇಳಿದ್ದರಂತೆ. ತೀರ ಕೊನೆಯ ಕಾಲದಲ್ಲಿ 'ಆ ವೈದ್ಯರಿಗೆ ಚಿತ್ರ ಕೊಟ್ಟಿರಾ? ನಾನು ಕಣ್ಣು ಮುಚ್ಚಿದರೂ ಅದನ್ನು ಮಾತ್ರ ಮರೆಯ ಬೇಡ' ಎಂದು ಹೇಳಿದರಂತೆ ಮಹದೇವ ದೇಸಾಯಿಗೆ. ಇಂಥವು ಎಷ್ಟೋ!

ಇಂಥ ಜೀವ ಹಿಂದುಸ್ಥಾನದಲ್ಲಿಯೂ, ಬೇರೆ ದೇಶಗಳಲ್ಲಿಯೂ ಸಾವಿರಾರು ಜನ ಗೆಳೆಯರನ್ನೂ, ಮನೆಯವರನ್ನೂ ಮಾಡಿಕೊಂಡರೆ ಏನಚ್ಚರಿ? ಇಂಥ ಬೆಳಕು ಎಷ್ಟೋ ಜನರ ಬಾಳಿನಲ್ಲಿ ಆನಂದದ ಬೆಳತಿಗೆಯನ್ನು ಹಚ್ಚಿದುದರಲ್ಲಿ ಸಂಶಯವೇನು? 'ಬ್ರಿಟಿಷ್ ಸಾಮ್ರಾಜ್ಯದಂಥ ದೊಡ್ಡ ದೇಶದ ಪ್ರಧಾನಿ ಆಗುತ್ತೀಯೋ, ಆಂಡ್ರೂಸ್ ಆಗುತ್ತೀಯೋ ಎಂದು ಕೇಳಿದರೆ

ನಾನು ಎರಡನೆಯ ವರವನ್ನೇ ಬೇಡುತ್ತೇನೆ' ಎಂದರು ಡಾ. ಎಡ್ಗಾರ ಬ್ರೂಕ್ಸ. ಅದರಲ್ಲಿ ಅನುಮಾನವುಂಟೇ?

೨

"ಮೋಹನ್, ಸ್ವರಾಜ್ಯ ಬರುತಿದೆ; ಭಾರತ ಸ್ವಾತಂತ್ರ್ಯ ನನ್ನ ಕಣ್ಣಿಗೆ ಕಟ್ಟಿದಂತಿದೆ."

ಆಂಡ್ರೂಸರು ಕ್ರಿಸ್ತಸನ್ನಿಧಿಗೆ ಪಯಣವಾಗುವ ಮುನ್ನ ಕಲಕತ್ತೆಯಲ್ಲಿ ಕಾಯಿಲೆ ಮಲಗಿದ್ದರು. ಆಗ ಗಾಂಧೀಜಿ ಅವರನ್ನು ನೋಡಿ ಬರಲೆಂದು ಹೋಗಿದ್ದರು. ಆಂಡ್ರೂಸರಿಗೆ ತುಂಬ ಕಾಯಿಲೆ, ನಿತ್ರಾಣ. ಮೈ ಸೋತರೂ ಮನಸ್ಸು ಮಾತ್ರ ಮೇಲೆಯೇ ರೆಕ್ಕೆ ಪಸರಿಸಿ ಹಾರಾಡುತ್ತಿತ್ತು. ಪ್ರಪಂಚವನ್ನೆಲ್ಲ ಒಂದೇ ತುತ್ತಿಗೆ ನುಂಗುತ್ತಿರುವ ಮಹಾಯುದ್ಧದ ವಿಕಾರ ಸ್ವರಕ್ಕೆ ಅವರ ಮನಸ್ಸು ಬೇಸತ್ತು "ಅಂತರ್ಲೋಕ"ದಲ್ಲಿ ಆಡುತ್ತಿತ್ತು. ಕಣ್ಣಿಗೆ ಕಾಣದ ಲೋಕ, ಬುದ್ಧಿಗೆ ನಿಲುಕದ ಶಾಂತಿ ಅವರಿಗೆ ವಶವಾದಂತಿತ್ತು. ಇಂದ್ರಿಯ ಜ್ಞಾನ ತೆಳುವಾದಂತೆ ಆ ಲೋಕ ಅನುಭವದಲ್ಲಿ ಅರಳುತ್ತದೆ. ಆಂಡ್ರೂಸರಿಗೆ ಆ ಅಮೃತಕಾಂತಿಯ ಅನುಭವದ ಗಳಿಗೆಯಲ್ಲಿಯೂ ಭಾರತದ ಸ್ವರಾಜ್ಯ ಕಣ್ಣಿಗೆ ಕಟ್ಟಿತ್ತು. "ಬರುತಿದೆ" ಎಂದರು, "ಕಾಣುತಿದೆ" ಎಂದರು. ಆ ಋಷಿಯ ವಾಕ್ಯ ಸತ್ಯವಾಗಲಿ.

ಆಂಡ್ರೂಸರಿಗೆ ಹಿಂದುಸ್ಥಾನವೆಂದರೆ ಬಹಳ ಪ್ರೀತಿ; ಹುಚ್ಚು ಎಂದರೂ ಸರಿ. ಅವರಿಗಿದ್ದಷ್ಟು ಭಾರತ ಪ್ರೇಮ ನಮ್ಮಲ್ಲಿ ಹಿರಿಯರಾದ ದೇಶಭಕ್ತರಿಗೂ ಇರಲಾರದು. ಕಲಕತ್ತೆಯಲ್ಲಿ ಹೆಸರಾದ ವೈದ್ಯರೆಲ್ಲಾ ಸೇರಿ ಅವರಿಗೆ ಎರಡು ಸಲ ಶಸ್ತ್ರಚಿಕಿತ್ಸೆ ಮಾಡಿ ನೋಡಿದರು. ಕಾಯಿಲೆ ಗುಣಮಾಡುವುದು ತಮಗೆ ಕಷ್ಟ ಸಾಧ್ಯವೆನಿಸಿತು. ಇಂಗ್ಲೆಂಡಿಗೋ, ಯೂರೋಪಿಗೋ ಹೋಗಬಾರದೇ, ಅಲ್ಲಾದರೆ ಸರ್ವಾನುಕೂಲ ಎಂದು ಬಹಳ ಹೇಳಿದರು. ಆಂಡ್ರೂಸರಿಗೆ ವಿಲಾಯತಿ ಯಾತ್ರೆಯಾಗಲಿ, ಚಿಕಿತ್ಸೆಯಾಗಲಿ ಕಷ್ಟವಿರಲಿಲ್ಲ. ಹಣ ಉಪಚಾರ, ಚಿಕಿತ್ಸೆ ಎಲ್ಲಕ್ಕೂ ಅನುಕೂಲವಿತ್ತು. ಆದರೆ ಆಂಡ್ರೂಸ್ ಒಪ್ಪಲಿಲ್ಲ. "ಆದದ್ದಾಗಲಿ, ಆಗುವುದೆಲ್ಲಾ ಇಲ್ಲೇ ಆಗಲಿ" ಎಂದರು.

ಇದಕ್ಕೆ ಮೊದಲೇ ಅವರ ಆರೋಗ್ಯ ಕೆಟ್ಟಿತ್ತು. ನಿರಂತರ ಪ್ರವಾಸ, ಕೈತುಂಬ ಕೆಲಸ. ಮನಸ್ಸಿಗೆ ಜಗತ್ತಿನ ಚಿಂತೆ. ಬ್ರಹ್ಮಚರ್ಯದಿಂದ ಬಡಕಲಾದ ಮೈ. ಮೂರು ನಾಲ್ಕು ವರ್ಷಕ್ಕೆ ಮೊದಲು ಅವರು ಇಂಗ್ಲೆಂಡಿಗೆ ಹೋದಾಗ ಇಂಗ್ಲೆಂಡಿನಲ್ಲಿ ಎಲ್ಲಾದರೊಂದು ಮೂಲೆಯಲ್ಲಿ ನೆಲಸಿ ಶಾಂತ ಜೀವನವನ್ನು ನಡೆಸಿದರಾಯಿತೆಂದು ಅಲ್ಲಿನ ಗೆಳೆಯರು ಬಹಳ ಬೇಡಿದರು, ಕಾಡಿದರು. ಆಂಡ್ರೂಸರು ಅದಕ್ಕೊಪ್ಪಲಿಲ್ಲ. ಉಂಟೆ? ಹಿಂದುಸ್ಥಾನ ತಮ್ಮ ಮನೆ, ತಮ್ಮ ನಾಡು. ಬೇರೆಲ್ಲಿಯಾದರೂ ತಾವು ನೆಲಸಬಹುದೆ?

ಆಂಡ್ರೂಸರ ಈ ಪ್ರೀತಿ ಹುಚ್ಚಲ್ಲದೆ ಮತ್ತೇನು? ೩೦ ವರ್ಷಗಳ ಕೆಳಗೆಯೇ ಆ ಪ್ರೀತಿ ಹೊರಹೊಮ್ಮಿತ್ತು. ಕೇಂಬ್ರಿಜ್ ವಿಶ್ವವಿದ್ಯಾಲಯದಲ್ಲಿ Triple first ಸರ್ವಶ್ರೇಷ್ಠರಾಗಿ ಉತ್ತೀರ್ಣರಾದವರು. ವಿದ್ಯಾರ್ಥಿಯಾದಾಗಲೇ ಅವರ ಲೇಖನಿ ಹೆಸರಾಗಿತ್ತು. ಹಿಂದುಸ್ಥಾನಕ್ಕೆ ಬರಬೇಕೆಂದು ಅವರು ಲೆಕ್ಕ ಹಾಕಿದಾಗ ಹಿರಿಯರು ಅಡ್ಡಿಮಾಡಿದರು. ಗೆಳೆಯರು ಬೇಡವೆಂದರು. ಅಲ್ಲಿಯೇ ಇದ್ದರೆ ಒಂದು ದಿನ ದೊಡ್ಡ ಪದವಿಗೇರುವುದು ಖಂಡಿತ, ಎಂದರು. "ನಿನ್ನ ಯೋಗ್ಯತೆಗೆ ನೀನು ತಪ್ಪದೆ, ಪ್ರಧಾನ ಮಂತ್ರಿಯಾಗುತ್ತೀ" ಎಂದು ಸೂಚಿಸಿದರು. ಆಂಡ್ರೂಸರಿಗೆ ಯಾವುದೂ ಹಿಡಿಸಲಿಲ್ಲ. ಅವರದು ಒಂದೇ ಉತ್ತರ:—"India calls."— ಹಿಂದುಸ್ಥಾನ ಕರೆಯುತಿದೆ. ಹಿಂದುಸ್ಥಾನ ಕರೆಯುತಿದೆ. ಹಿಂದುಸ್ಥಾನದ ಕರೆ; ಭಾರತಮಾತೆಯ ಸಂದೇಶ ಅವರಿಗೆ ನಿರಂತರವೂ ಕೇಳಿಸುತಿತ್ತು. ಈ ಎರಡು ಪದಗಳೇ ಅವರ ಹುಚ್ಚಿನ ಬಾವುಟ.

"ಈ ದಾರಿಯಲ್ಲಿ ನಡೆವಾಗ ಆಗುವ ಆನಂದ ಲಂಡನ ಬೀದಿಗಳಲ್ಲಿ ಹೇಗೆ ಬರಬೇಕು?" ಎನ್ನುತ್ತಿದ್ದರು — ವರ್ಧಾದಿಂದ ಸೇವಾಗ್ರಾಮಕ್ಕೆ ಬರಿಗಾಲಲ್ಲಿ ಏದುತ್ತಾ ನಡೆವಾಗ. ನಿಜವಾಗಿಯೂ ಭಾರತದ ಬಡ ಗುಡಿಸಿಲುಗಳಲ್ಲಿ ಈ ಮೂಕ ಜೀವಿಗಳೊಡನೆ ಮಾತಾಡುತ್ತ, ಅರೆ ನಾಗರಿಕರೊಡನೆ ಕಲೆಯುತ್ತಾ ಇದ್ದಾಗ ಅವರು ಪಡೆದ ಆನಂದ ಮತ್ತೆಲ್ಲಿಯೂ ಅವರಿಗೆ ಸಿಗಲಿಲ್ಲ. ಆ ಅನುಭವ, ಆ ಆನಂದವೇ ಅವರ ಬಾಳಿಗೆ ಬಣ್ಣ ಕೊಟ್ಟದ್ದು: ಆ ಗರುಡ ಜೀವಕ್ಕೆ ರೆಕ್ಕೆ ಕೊಟ್ಟದ್ದು.

ಹಿಂದುಸ್ಥಾನಕ್ಕೂ ಇಂಗ್ಲೆಂಡಿಗೂ ಇರುವ ಬಾಂಧವ್ಯದ ರೀತಿಯಲ್ಲಿ ಹಿಂದುಸ್ಥಾನವನ್ನೇ ತನ್ನ ಮನೆಯಾಗಿ ಮಾಡಿಕೊಳ್ಳುವುದು ಇಂಗ್ಲೀಷು ಜನಕ್ಕೆ

ಸಾಧ್ಯವಲ್ಲ. ಇಂಗ್ಲೀಷರೆಲ್ಲರನ್ನೂ "ಹಿಂದುಸ್ಥಾನ ಕರೆಯುತಿದೆ" ನಿಜ. ಆದರೆ ಅವರಿಗೆ ಕೇಳಿಸುವ ಕರೆ ಬೇರೆ! ಆಂಡ್ರೂಸ್, ಎಲ್ವಿನ್, ಮೀರಾಬೆನ್—ಇಂತಹವರಿಗೆ ಕೇಳಿಸುವ ಕರೆಯೇ ಬೇರೆ. ಅದರಲ್ಲೂ ಆಂಡ್ರೂಸರಂತೂ ಭಾರತೀಯರಿಗಿಂತ ಭಾರತೀಯರು. ಅಂತೆಯೇ ಅವರಿಗೆ ಭಾರತದ ಪರಾಧೀನತೆ ಸ್ವಲ್ಪವೂ ಸಹಿಸಲಿಲ್ಲ. ಸಾವಿರಾರು ಮೈಲಿ ದೂರ ದಲ್ಲಿರುವ ಪರರಾಷ್ಟ್ರವೊಂದು ಭಾರತವನ್ನಾಳುವ ವೈಚಿತ್ರ್ಯವನ್ನು ನೋಡಿ ರೇಗಿದರು; ಪರದಾಸ್ಯ ಬಹಳ ಕಾಲ ಸಾಗಿದರೆ ಜನಾಂಗವೇ ಹೇಳಹೆಸರಿಲ್ಲದೆ ನಾಶವಾದೀತಲ್ಲ ಎಂದು ಕೆಂಡವಾಗಿ ಹೋದರು. ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ಸಿಗಬೇಕೆಂದೂ, ಒಂದು ಗಳಿಗೆಯೂ ತಡವಾಗಬಾರದೆಂದೂ ಗರ್ಜಿಸಿದರು. Indian Independence ಎಂಬ ಪುಸ್ತಕ ಬರೆದು ತಮ್ಮ ಅಭಿಪ್ರಾಯವನ್ನು ತೀಕ್ಷ್ಣವಾಗಿ ಪ್ರತಿಪಾದಿಸಿದರು. "ದೀರ್ಘ ದಾಸ್ಯದಿಂದ ಜನಾಂಗವೇ ನಾಶವಾದೀತೆಂಬ ವಾಕ್ಯದಲ್ಲಿ ಹುದುಗಿರುವ ಅವಮಾನ ಚೆನ್ನಾಗಿ ಅರ್ಥವಾಗಬೇಕು; ಈ ವಾಕ್ಯ ಪ್ರತಿಯೊಬ್ಬ ಭಾರತೀಯನ ಎದೆಯಲ್ಲಿ ನೆಡಬೇಕು. ಈ ಅವಮಾನದ ರೋಷ ಪೂರಾ ಕುದಿಯಬೇಕು; ಆಗಲೇ ಮೋಕ್ಷ" ಎಂದು ಬರೆದರು. ಇಂದಿಗೂ ರಾಷ್ಟ್ರೀಯ ಸಾಹಿತ್ಯದಲ್ಲಿ ಅದೊಂದು ಅಮೂಲ್ಯ ಪುಸ್ತಕ.

ಇಂಥ ಜೀವಕ್ಕೆ ಗಾಂಧೀಜಿಯಂಥ ದಳಪತಿ ದೊರೆತು, ಅವರ ಜೊತೆ ಯಲ್ಲಿ ಕೆಲಸಮಾಡುವ ಭಾಗ್ಯ ದೊರೆತರೆ ಕೊನೆಯ ಗಳಿಗೆಯಲ್ಲಿ ಭಾರತ ಸ್ವಾತಂತ್ರ್ಯ ಕಣ್ಣಿಗೆ ಕಟ್ಟದೆ ಇದ್ದೀತೇ? ಅದು ಬರಿಯ ಕನಸೇ ಇದ್ದೀತು; ಆದರೆ ಅಂಥ ಕನಸನ್ನು ಕಟ್ಟಬಲ್ಲವರಾದರೂ ಎಷ್ಟು ಮಂದಿ ನಮ್ಮಲ್ಲಿ?

ಜಲಿಯನ್‌ವಾಲಾಬಾಗ್ ದುರಂತ, ರೌಲಟ್‌ಶಾಸನಗಳಿಂದ ಹಿಂದು ಸ್ಥಾನ ಗಾಸಿಗೊಂಡಾಗ ಆಂಡ್ರೂಸರು ಪಂಜಾಬಿಗೆ ಹೋಗಿದ್ದರು. ಜನರಲ್ಲಿ ಬೆರೆತು, ಅವರ ಮನಸ್ಸನ್ನು ತಿಳಿದುಕೊಳ್ಳಬೇಕೆಂಬ ಆಸೆ ಅವರದು. ನಿವೃತ್ತ ಸೈನ್ಯಾಧಿಕಾರಿಯೊಬ್ಬಾತನ ಬಳಿಗೆ ಹೋದರು. ಅರ್ಧ ಗಂಟೆ ಮಾತಾಡಿದರೂ ಆತ ಹೆಚ್ಚಾಗಿ ಏನೂ ಹೇಳಲಿಲ್ಲ. ಎಷ್ಟಾದರೂ ಆಂಡ್ರೂಸ್ ಪರಂಗಿಯವ ರಲ್ಲವೆ? ಹೇಗೆ ಅವರಿಗೆ ನಿಜ ಹೇಳುವುದು? ದೀನಬಂಧುವಿಗೆ ಇದು ಅರ್ಥವಾಯಿತು. 'ಅಣ್ಣ, ನನ್ನೊಡನೆ ಸಂಕೋಚವೇಕೆ?' ಎಂದು

ಆತನನ್ನು ತಬ್ಬಿಕೊಂಡರು. ಆ ಅಧಿಕಾರಿಯ ಮನಸ್ಸು ಕರಗಿ ಹೋಯಿತು. ತನ್ನ ಅಂಗಿಯನ್ನು ಕಳಚಿ, ಮೈಮೇಲಿನ ಗಾಯದ ಗುರುತುಗಳನ್ನು ತೋರಿಸಿದ. ನಡೆದ ದೌರ್ಜನ್ಯವನ್ನೆಲ್ಲ ವಿವರಿಸಿದ.

ದೀನಬಂಧುವಿನ ಈ ನಿರಭಿಮಾನ, ಈ ವಿಶಾಲ ಹೃದಯವೆ ಅವರ ರಸ ಜೀವನದ ಗುಟ್ಟು. ಎಲ್ಲ ಮದಗಳಲ್ಲೂ ಕುಲಮದ ಬಲು ಗಡುಸಾದದ್ದು; ಬೇಗನೆ ಬಿಡದು. ಇಂಗ್ಲೀಷರು ಹಿಂದುಸ್ಥಾನದಲ್ಲಿ ಅರಸು ಕುಲದವರು! ಅಂಥ ಅರಸು ಕುಲದಲ್ಲಿ ಹುಟ್ಟಿ ಈ ಗುಲಾಮರೊಡನೆ ಒಡನಾಟವೆ? ಇಂಥ ಜಾತಿದ್ರೋಹವೇ? ಕೊಡಲಿಯ ಕಾವು ಕುಲಕ್ಕೆ ಮೃತ್ಯುವಾದಂತೆ!

ಆಂಡ್ರೂಸರ ಬಾಳಿನಲ್ಲಿ ಆ ಅಮರ ತೇಜ, ಕ್ರಿಸ್ತ ಭಕ್ತಿ ಅಷ್ಟು ತುಂಬಿ ತುಳುಕದಿದ್ದರೆ ಈ ದ್ರೋಹ,—ಹಿಂದುಸ್ಥಾನದ ಪ್ರೀತಿ—ಕ್ರಿಸ್ತನ ಗತಿಗೇ ಇವರನ್ನೂ ಎಳೆಯುತ್ತಿತ್ತು; ಶಿಲುಬೆಗೇರಿಸುತಿತ್ತು. ಇವರು ತಾನೆ ಏನು ಕಡಿಮೆ ಕ್ರಿಸ್ತನಿಗಿಂತ! ಬಡಬಗ್ಗರಿಗಾಗಿ, ನರಿಕುರಿಗಳಿಗಾಗಿ, ಧರ್ಮಸಂಸ್ಥಾಪನೆಗಾಗಿ ಯಾವ ದೊರೆ, ಯಾವ ಪ್ರಭುತ್ವವನ್ನು ಇದಿರಿಸದೆ ಬಿಟ್ಟಿದಾರೆ? ಜಲಿಯನ್‌ವಾಲಾಬಾಗ್ ಪ್ರಕರಣವನ್ನು ಅವರು ಟೀಕಿಸಿದ ಬಗೆ ಎಂಥ ಕಟುವಾದದ್ದು? ದಕ್ಷಿಣ ಆಫ್ರಿಕ, ಬ್ರಿಟಿಷ್ ಗಯಾನಾ, ಟ್ರಿನಿಡಾಡ್, ಫಿಜಿ ಪ್ರಾಂತಗಳಲ್ಲಿ ಅವರು ಮಾಡಿದ ಸೇವೆ, ಅವರು ಮಾಡಿದುದೆಂತಲೆ ರಾಜ ದ್ರೋಹವಾಗಲಿಲ್ಲ.

'ನಮ್ಮ ದೇಶದಲ್ಲಿ ಇಬ್ಬರ ಜಗಳದಲ್ಲಿ ಲಾಭ ಪಡೆಯುವ ಮೂರನೆ ಕೈ ಯಾವುದೂ ಇಲ್ಲ. ಹಿಂದುಸ್ಥಾನದಲ್ಲಿ ಅಡ್ಡಬಾಯಿ ಹಾಕಲು ಒಂದು ಪರಪಕ್ಷವಿದೆ. ಅಂತಲೆ ಈ ಜಗಳ, ಕದನ'—ಎನ್ನುತ್ತಿದ್ದರು ದೀನಬಂಧು. 'ಹಿಂದುಸ್ಥಾನವನ್ನು ನಿರ್ಬಲಗೊಳಿಸಿ, ನಿಸ್ಸಹಾಯವಾಗಿ ಮಾಡಿ ಅದನ್ನು ನಾವು ಬಿಟ್ಟುಹೋದರೆ ಎಲ್ಲಾ ದಿಕ್ಕಾಪಾಲಾದೀತು ಎಂಬ ಮಾತು ಶುದ್ಧ ತಪ್ಪು. ಪರದೇಶದ ಪ್ರಭುತ್ವಕ್ಕೆ ಎಳ್ಳಷ್ಟೂ ಸಹಕಾರ ಕೊಡಕೂಡದು' ಎಂದರು.

ದೀನಬಂಧು ನಂಬಿದ ಕ್ರಿಸ್ತ ಧರ್ಮವೂ ಅಷ್ಟೆ. ಅದಕ್ಕೆ ಬೇಲಿ, ಬದುವು ಯಾವುದೂ ಇರಲಿಲ್ಲ. ಅನಂತವಾದ ಮುಗಿಲು ಅದು; ಸಂಜೀವನಿಯಾದ ರಸವೃಷ್ಟಿ. ಧರ್ಮ ಜೀವನಕ್ಕೆ, ಶರಣ ಜೀವನಕ್ಕೆ ಅಂತರಂಗ

ಮುಖ್ಯ. ಬೂದಿಯಲ್ಲಿ ಹೊರಳಿಸಿದರೆ ಕತ್ತೆ ಭಕ್ತನಾದೀತೆ? ಕ್ರಿಸ್ತನೇನು? ಬೌದ್ಧನೇನು? "ಯಾತರ ಹೂವಾದರೇನು?" ಎಲ್ಲ ಧರ್ಮದ ಸಾರ ಒಂದೇ. ಎಲ್ಲ ಧರ್ಮದ ದಾರಿ ಒಂದೇ! ದಿವ್ಯ ಜೀವನದ ಪರಿಮಳ ತಾನೇ ಹರಡುತ್ತದೆ. ಯಾರೂ ಅದನ್ನು ಹೊತ್ತು ಬೀದಿ ಬೀದಿ ತಿರುಗಿ ಹಂಚ ಬೇಕಾಗಿಲ್ಲ. ಗುಲಾಬಿಯ ಕಂಪು ಹೊತ್ತು ತರಬಂದೀತೆ? ಹಿಂದುಸ್ಥಾನಕ್ಕೆ ಬಂದ ಹೊಸದರಲ್ಲಿ ಆಂಡ್ರೂಸರ ಕಣ್ಣುಪರೆ ಹರಿದಿರಲಿಲ್ಲ. ಅವರ ಧರ್ಮ ದೃಷ್ಟಿಗೆ ಬೇಲಿ ಹಾಕಿತ್ತು. ಕ್ರಿಸ್ತಧರ್ಮೋಪದೇಶಮಾಡಿ ಜನರನ್ನು ಸತ್ಯ ಮಾರ್ಗಕ್ಕೆ ಸೆಳೆಯಬೇಕೆಂಬ ಹಂಬಲವಿತ್ತು. ಕಾಲ ಕಳೆದಂತೆ ಆ ಬದುವು ಕಡಿದು ಹೋಯಿತು. ಅವರವರ ಧರ್ಮ ಅವರವರಿಗೆ ಶ್ರೇಯ, ಎಲ್ಲ ಧರ್ಮದ ಸತ್ಯವೂ ಒಂದೇ ಎಂಬ ಭಾವ ಅರಳಿತು. ಆ ಭಾವ ಬಲಿತಂತೆ ಅವರ ಹಿಂದುಸ್ಥಾನದ ಪ್ರೀತಿಯೂ ಬಲವಾಯಿತು. ಬೈಬಲಿನ ಹಾಗೆ, ಗೀತೆ ಉಪನಿಷತ್ತುಗಳು ಪ್ರಿಯವಾದುವು. ಗೀತೆಯ ಧರ್ಮಯುದ್ಧದ ರೂಪಕವನ್ನು ಪದೇ ಪದೇ ನೆನೆಯುತ್ತಿದ್ದರು.

ಈ ಮನೋವೃತ್ತಿಗೆ ಅವರ ಗೆಳೆಯರ ಪ್ರಭಾವವೂ ಪುಟ ಕೊಟ್ಟಿತು. ಭಾರತಕ್ಕೆ ಬಂದ ಹೊಸದರಲ್ಲಿ ಅವರಿಗೆ ದೊರೆತ ಇಬ್ಬರು ಗೆಳೆಯರು ಅವರ ಪೂರ್ವ ಪುಣ್ಯದ ಫಲವೆ ಸರಿ. ಮಹಮ್ಮದೀಯರಾದ ಮುನ್ಷಿ ಜಕಾಉಲ್ಲಾ, ಕಿರಸ್ತಾನರಾದ ಸುಶೀಲಕುಮಾರ ರುದ್ರ. ಇಬ್ಬರೂ ಮಹಾ ಪುರುಷರು. ಮೂವರದೂ ಬೇರೆ ಬೇರೆ ವ್ಯಕ್ತಿತ್ವ. ಆದರೂ ಆ ಅಂತರಂಗದ ಗೆಳೆತನ ಮೂರು ಕಾಲಿನ ಜಡೆಯಂತೆ ಅವರನ್ನು ಹೆಣೆದಿತ್ತು. ಮೂವರದೂ ಒಂದು ಸಾಧನಾರಂಗ, ಒಂದು ಅನುಭವ ಮಂಟಪ. ಈ ಸಹವಾಸವೇ ದೀನಬಂಧು ವಿನ ವಿಶಾಲ ಜೀವನದ ಬೀಜ.

ದೀನಬಂಧುವಿನ ಪುಣ್ಯ ಅಲ್ಲಿಗೇ ನಿಲ್ಲಲಿಲ್ಲ. ರವೀಂದ್ರ ಗುರುದೇವ ಸಾಹಚರ್ಯವನ್ನೂ, ಗಾಂಧೀಜಿಯ ಗೆಳೆತನವನ್ನೂ ಒದಗಿಸಿ ಕೊಟ್ಟಿತು. ಇತ್ತ ರಸ ಋಷಿ, ಅತ್ತ ಯೋಗೀಶ್ವರ– ಈ ಗೆಳೆತನದ ಕಾವಿಗೆ ಜೀವ ಮಾಗಿ ಬಂತು. ಮೊದಲೇ ಕವಿಜೀವ, ಅಧ್ಯಾತ್ಮಪ್ರವೃತ್ತಿ ಬೇರೆ, ಸಾಲದ್ದಕ್ಕೆ ಸೋತವರ ಸಂಕಟ ತನ್ನದೆಂಬ ದಯಾಗುಣ. ದೀನ ಸೇವೆಯೆ ಕ್ರಿಸ್ತಸೇವೆ ಯೆಂಬ ದೃಢ ಶ್ರದ್ಧೆ, ಆಂಡ್ರೂಸರು ಬರಬರುತ್ತ ದಯಾ ಧರ್ಮದ

ಪುತ್ಥಳಿಯಾಗಿ ಹೋದರು. ಆ ಜೀವ ಮಿಡಿಯದ ದುಃಖವಿರಲಿಲ್ಲ. ಜಗತ್ತಿನಲ್ಲಿ ಭೂಕಂಪವಾದಾಗ, ಪ್ರವಾಹಬಂದಾಗ, ಉಪದ್ರವ ಪೀಡಿಸಿದಾಗ ನಿರಾಶ್ರಿತ ರಾದವರಿಗೆ ಅನಾಥರಾದವರಿಗೆ ನೆರವಾಗಲು ದೀನಬಂಧುವಿಗಿದ್ದ ಕಾತರತೆಗೆ ಈಗಲೂ ಜನ ಸಾಕ್ಷಿಯಾಗಿದಾರೆ. ಉತ್ಕಲದ ಬಡತನ ಅವರಿಗೊಂದು ಕೊರಗಾಗಿತ್ತು. ಭಾರತದ ಪರಾಧೀನತೆಯಂತೂ ಹೃದಯಶಲ್ಯ.

ಇದೆಲ್ಲ ರಾಜಕೀಯ, ಸಾಂಘಿಕರ ನಡುವೆಯೂ ಅವರ ಸುಕುಮಾರ ಮನೋವೃತ್ತಿ ಮಾತ್ರ ಮಾಯವಾಗಲಿಲ್ಲ. ಆ ಭಾವ ಜೊತೆ ಜೊತೆಗೇ ಬೆಳೆದುಬಂತು. ಮಾನವನ ಚಿಕ್ಕಪುಟ್ಟ ನಿಸ್ವಾರ್ಥ ಕೃತಿಗಳಲ್ಲಿ, ಶ್ರದ್ಧೆಯ ಗಳಿಗೆಯಲ್ಲಿ ದೇವರು ಮೂಡಿ ಬರುತ್ತಾನೆಂಬ ಅನುಭವ ಅವರಿಗಿತ್ತು. ಕೊನೆಯ ಗಳಿಗೆಯಲ್ಲಿ ಕೂಡ 'ದೇವರ ತೊಡೆಯಲ್ಲಿ ಮಲಗುತ್ತೇನೆ' ಎಂದರು. ಅಷ್ಟು ಮಾಗಿತ್ತು ಆ ಬಾಳು. ಕೊನೆಯ ಗಳಿಗೆಯಲ್ಲಿ ತನ್ನನ್ನು ನೆನೆದವರು ತನ್ನನ್ನು ಸೇರುವರಂತೆ; ಗೀತೆಯಲ್ಲಿ ಭಗವಂತನು ಹೇಳಿದಾನೆ. ಸದಾ ತನ್ನನ್ನು ನೆನೆಯದವರಿಗೆ ಕೊನೆಯ ಗಳಿಗೆಯಲ್ಲಿ ತನ್ನ ನೆನಪಾಗದಂತೆ; ಅದನ್ನೂ ಹೇಳಿದಾನೆ. ದೀನಬಂಧು ಕೊನೆಯ ಗಳಿಗೆಯಲ್ಲಿ ದೇವರನ್ನು ನೆನೆದರು; ದಿವ್ಯವನ್ನು ಪಡೆದರು.

ಗಾಂಧೀಜೀ ಹೇಳಿದಾರೆ: "ನನಗೂ ದೀನಬಂಧುವಿಗೂ ನಡುವೆ ಯಾವ ಸಂಕೋಚವೂ ಇರಲಿಲ್ಲ." ನಿಜ. ಇಂತಹ ಶರಣ ಜೀವದ ಇದಿರು ಯಾವ ಸಂಕೋಚ ಇರಬಲ್ಲದು?

# ಗೋಪಬಂಧು ದಾಸ

( ಉತ್ಕಲದ ದೀನಬಂಧು )

ಹಿಂದುಸ್ಥಾನದ ರೈತ ನಿರ್ಭಾಗ್ಯ ಬೋರೇಗೌಡ. ಅವನ ಬದುಕಿನಲ್ಲಿ ಬೆಳಕಿಲ್ಲ, ಮೈಯಲ್ಲಿ ನೆತ್ತರಿಲ್ಲ. ಬಡತನದ ಕಲ್ಲುಗಾಣ ಅವನನ್ನು ನಿಧಾನವಾಗಿ ಹಿಂಡಿಹಾಕುತ್ತಿದೆ. ಅದೊಂದು ಅರೆಜೀವ, ಬರಿ ಸಾವು. ನಮ್ಮ ನಾಡನ್ನು ಕವಿದಿರುವ ಈ ಕರಾಳಕತ್ತಲೆಯನ್ನು ತಿಳಿಯದವರು ಯಾರು ? ಬೀದಿಬೀದಿಯಲ್ಲಿ ಭಾಷಣ ಮೊಳಗುತ್ತವೆ. ಸಭೆಗಳಲ್ಲಿ ಬಿಸಿಬಿಸಿ ತೀರ್ಮಾನಗಳಾಗುತ್ತವೆ. ಪತ್ರಿಕೆಗಳಲ್ಲಿ ಮನಕರಗುವ ಲೇಖನ, ಎಲ್ಲೆಲ್ಲಿಯೂ ಅದೇ ಸುದ್ದಿ. ಎಲ್ಲ ಚಳುವಳಿಗೂ ಅದೇ ಆಧಾರ.

ಆದರೆ ಗಾಂಧೀ, ವಿವೇಕಾನಂದರಂತಹ ಮಹಾಪುರುಷರಿಗಲ್ಲದೆ ಉಳಿದವರಿಗೆ ಆ ಬಡತನದ ಪೀಡೆಯನ್ನು ಅಷ್ಟು ತೀವ್ರವಾಗಿ ಅನುಭವಿಸಲು ಸಾಧ್ಯವೇ ? ಉಳಿದುದೆಲ್ಲ ನೀರಗುಳ್ಳೆ. ಗಳಿಗೆ ಹೊತ್ತಿನ ಗುಡುಗು.

ಉತ್ಕಲದ **ಗೋಪಬಂಧು ದಾಸ**ರದೂ ಆ ಹಿರಿಯರಂಥ ಮಹಾಜೀವ. ದರಿದ್ರನಾರಾಯಣನನ್ನು ಅವರಂತೆ ಆರಾಧಿಸಿದವರು ಬಹಳ ಕಡಿಮೆ. ಬಡವರ ಸೇವೆಯೆಂದರೆ ಅವರಿಗೊಂದು ಹುಚ್ಚು. ಬಡವರು, ಓದುವ ಹುಡುಗರು—ಇವರಿಬ್ಬರೇ ಅವರ ತಲೆಯಲ್ಲಿ ಯಾವಾಗಲೂ ಮನೆಮಾಡಿಕೊಂಡಿದ್ದವರು. ಸದಾ ಹಳ್ಳಿಯಲ್ಲಿ ಇರುವ ಅವಕಾಶ ಅವರಿಗೆ ಸಿಗುತ್ತಿರಲಿಲ್ಲ. ಕಾರ್ಯಾರ್ಥವಾಗಿ ಪಟ್ಟಣಗಳಲ್ಲಿ ಇರಬೇಕಾಗುತ್ತಿತ್ತು. ಶಾಸನಸಭಾಸದಸ್ಯರಾಗಿ ದೂರಹೋಗಬೇಕಾಗುತ್ತಿತ್ತು. ತಾವು ಸ್ಥಾಪಿಸಿದ 'ಸಮಾಜ' ಎಂಬ ಉರಿಯಾ ಪತ್ರಿಕೆಯನ್ನು ನಡೆಯಿಸಲು ಪೂರಿಯಲ್ಲೋ ಕಟಕ್‌ನಲ್ಲೋ ಇರುತ್ತಿದ್ದರು. ಎಲ್ಲೇ ಇರಲಿ, ಅವರ ಜೀವನೆಲ್ಲ ಹಳ್ಳಿಯಲ್ಲಿ, ಹಳ್ಳಿಯ ಜನರಲ್ಲಿ. ಹಳ್ಳಿಯವರ ಹಾಗೆಯೆ ತಮ್ಮ ಬದುಕನ್ನು ಸಾಗಿಸಿದರು. ಅವರ ಹಾಗೆ ಉಡಿಗೆತೊಡಿಗೆಯುಟ್ಟರು. ಅವರಂತೆ ನಿರಾಡಂಬರವಾದ ಸರಳ ಜೀವನ ನಡೆಯಿಸಿದರು. ಅವರಿಗಿಲ್ಲದ ಸಿರಿವಂತಿಕೆ, ಭೋಗಗಳನ್ನು ನಿರಾಕರಿಸಿ

ದರು. ಸರಳಜೀವಿಗಳಾದ ಹಳ್ಳಿಯವರಿಗಿದ್ದ ಸರಳವಾದರೂ ಆಳವಾದ ದೈವಭಕ್ತಿ ಇವರದು. ಅವರ ದೀನಪ್ರೇಮವನ್ನು ಅನುಭವಿಸಿ ತಿಳಿಯಬೇಕು. ಅಷ್ಟು ಚೆಲುವು-ಅದು. ಆ ಪ್ರೇಮದ ಗಾಂಭೀರ್ಯಬಲವೇ ಅವರನ್ನು ಹಾಗೆ ಹುಚ್ಚರನ್ನಾಗಿಮಾಡಿದುದು. ಎಳೆಯಮಕ್ಕಳು, ಬಡಹೆಂಗುಸರು, ಮೂಕದನ- ಇವೇ ಅವರ ಒಲವಿನ ಬಳಗ. ಆ ಬಳಗವನ್ನು ಬಿಟ್ಟು ಈಚೆಗೆ ಬರುವುದು ಈ ದೀನಬಂಧುವಿಗೆ ಸಾಧ್ಯವೇ ಇರಲಿಲ್ಲ.

ಒಮ್ಮೆ ಉತ್ಕಲದ ಶ್ರೀಮಂತನೊಬ್ಬ ಗೋಪಬಂಧು ದಾಸರನ್ನು ಊಟಕ್ಕೆ ಕರೆದ. ದಾಸರು ದೇಶಸೇವಕರು; ಮುಂದಾಳು. ಅಂಥವರು ತನ್ನ ಮನೆಗೆ ಅತಿಥಿಯಾಗಿ ಬಂದಾಗ ತಾನು ಕಾರ್ಪಣ್ಯಮಾಡಬಹುದೇ! ಊಟಕ್ಕೆ ಕೂತಾಗ ರುಚಿರುಚಿಯಾದ ಸವಿತಿನಿಸು ಬಂದುವು. ಹೆಚ್ಚಾಗಿ ಬಂದುವು. ಗೋಪಬಂಧು ಎಲೆಯನ್ನು ನೋಡಿ ಬಿಕ್ಕಿ ಬಿಕ್ಕಿ ಅಳತೊಡಗಿದರು. ದಾಸರಿಗೆ ಔತಣವೆಂದು ಮನೆಯಾತ ಅನೇಕರನ್ನು ಪಙ್ತಿಗೆ ಕರೆದಿದ್ದ. ಎಲ್ಲರೂ ಗಾಬರಿಯಾದರು. 'ಇದೇನು' ಎಂದು ಕೇಳಿದರು. ಅಳುತಳುತ್ತ ಗೋಪ ಬಂಧು ಹೇಳಿದರು: 'ಹೀಗುಂಟೆ? ಇಂಥ ಊಟಕ್ಕೆ ನಾನು ಯೋಗ್ಯನೆ? ಯಾವ ನಾಡಿನಲ್ಲಿ ಒಂದು ಹಿಡಿ ಅಕ್ಕಿಗಾಗಿ ಪಡಬಾರದ ಪಾಡನ್ನು ಪಡುತ್ತಾರೋ ಜನ, ಅಂಥ ನಾಡಿನ ನಾವು, ಈ ತರದ ಚೊಕ್ಕ ಭೋಜನ ಮಾಡಬಹುದೇ? ದೇವರು ಇದನ್ನು ಮೆಚ್ಚಿಯಾನೆ?' ಬಂದಿದ್ದವರು ಏನನ್ನೋ ಹೇಳಹೋದರು. ಗೋಪಬಂಧು ಊಟಮಾಡಲಿಲ್ಲ; ಅಲ್ಲಿ ಇರಲೂ ಇಲ್ಲ. ಎದ್ದು ಹೊರಟುಹೋದರು. ಹೋಗುವಾಗಲೂ ಕಣ್ಣು ಹನಿ ತುಂಬಿತ್ತು.

ಉತ್ಕಲಪ್ರಾಂತ ಎಷ್ಟು ದರಿದ್ರವಾದುದೋ ತಿಳಿಯದಿದ್ದರೆ ಗೋಪ ಬಂಧುವಿನ ಈ ಆಳವಾದ ನೋವು ಅರ್ಥವಾಗದು. ಹಿಂದುಸ್ಥಾನವೆ ಬಡ ದೇಶ. ಅದರಲ್ಲಿ ಉತ್ಕಲ ನಿರ್ಭಾಗ್ಯಪ್ರಾಂತ. ಅದು ಬರದ ತವರುಮನೆ; ಜಲಪ್ರಳಯದ ಅಂಗಳ. ಆ ನಾಡಿನ ಜನ ಜೀವಚ್ಛವಗಳು. ಉಡಿಯಾದ ಅಸ್ಥಿಪಂಜರಗಳು– Skeletons of Orissa– ಎಂದಿದ್ದಾರೆ ಗಾಂಧಿಜೀ ಆ ಜನರನ್ನು.* ಗೋಪಬಂಧು ಮೊದಲೇ ರಸಜೀವಿ; ಭಾವನಾಪ್ರಧಾನ ಚೇತನ. ಸುತ್ತಲಿನ ಸಾವು-ನೋವನ್ನು ಕಂಡು ಬುದ್ಧ-ಭಗವಾನನು ತಪಸ್ವಿಯಾದ.

* ಉತ್ಕಲದ ದಾರಿದ್ರ್ಯದ ಬಗ್ಗೆ ಲೇಖಕರ 'ನಿರ್ಭಾಗ್ಯ ಬೋರೇಗೌಡ' ಪುಸ್ತಕ ವನ್ನೋದಬೇಕು.

ತನ್ನ ನಾಡವರ ಬಡತನದ ಭೀಷಣ ಚಿತ್ರವನ್ನು ನೋಡಿ ಗೋಪಬಂಧು ಸೇವಾವ್ರತವನ್ನು ಹಿಡಿದ; ಜೋಗಿಯಾದ.

ಗೋಪಬಂಧುವಿನ ಮನೆತನವೂ ಈ ಪರಿಣಾಮಕ್ಕೆ ಸಹಕಾರಿಯಾಗಿತ್ತು. ಜಾತಿಯಲ್ಲಿ ಬ್ರಾಹ್ಮಣ. ಆಸ್ತಿಕ ಮನೆತನ. ಪೂರೀ ಜಗನ್ನಾಥ ಕ್ಷೇತ್ರಕ್ಕೆ ೧೦-೧೨ ಮೈಲಿ ದೂರದಲ್ಲಿ, ಒಂದು ಹಳ್ಳಿಯಲ್ಲಿ ಹುಟ್ಟಿದುದು. ಊರು ಚಿಕ್ಕದು. ಅದರಲ್ಲಿ ಇದ್ದುವೆಲ್ಲ ಬರಿ ಗುಡಿಸಿಲುಗಳೇ. ದಾಸರ ತಂದೆ ನಿಷ್ಠಾವಂತರಾದ ಭಾವುಕರು. ಎಳೆಯತನದಲ್ಲೆ ಮಗನಿಗೆ ಜಗನ್ನಾಥ ದಾಸರ ಭಾಗವತ- ಉತ್ಕಲದ ವೈಷ್ಣವರಲ್ಲಿ ಬಹಳ ಪ್ರಚುರವಾದ ಗ್ರಂಥ- ವನ್ನು ಬಾಯಿಪಾಠ ಮಾಡಿಸಿದ್ದರು. ತಂದೆ ದೈತ್ಯಾರಿದಾಸರ ಭೂತದಯೆ ಬಹಳ ಮೇಲ್ತರಗತಿಯದು. ಮಗನ ರಕ್ತದಲ್ಲಿ ಆ ಗುಣ ಹರಿದು ಬಂತು.

ಎಂತಲೇ ಗೋಪಬಂಧು ದಾಸರ ದೇಶಾರಾಧನೆ, ಲೋಕಸೇವೆಯ ಉತ್ಸಾಹ ಧಾರ್ಮಿಕೋದ್ರೇಕದಲ್ಲಿ ಹೊರಹೊಮ್ಮಿತು. ದಾಸರು ಆಗ- ೧೯೦೩ ರಲ್ಲಿ- ಕಲಕತ್ತೆಯಲ್ಲಿ ಕಾಲೇಜು-ವಿದ್ಯಾಭ್ಯಾಸಕ್ಕೆ ತೊಡಗಿದ್ದರು. ಈಗ ಉತ್ಕಲ ಒಂದು ಪ್ರಾಂತವಾಗಿದೆ; ಆಗ ಪ್ರಾಂತವಾಗುವ ಭಾಗ್ಯ ಅದಕ್ಕೆ ಇನ್ನೂ ಬಂದಿರಲಿಲ್ಲ. ಉತ್ಕಲದ ವಿದ್ಯಾರ್ಥಿಗಳು ಕಾಲೇಜು ವಿದ್ಯಾಭ್ಯಾಸಕ್ಕೆ ಬಂಗಾಲಕ್ಕೆ, ಕಲ್ಕತ್ತೆಗೆ ಹೋಗಬೇಕಾಗಿತ್ತು. ಉತ್ಕಲದಲ್ಲಿ ಕಾಲೇಜೇ ಇರಲಿಲ್ಲ. ಉತ್ಕಲದ ಭಾಗ್ಯ ನಿರ್ಣಯ ಬಂಗಾಲದಲ್ಲಿ. ಹೀಗಾಗಿ ಬಂಗಾಲಕ್ಕೂ ಉತ್ಕಲಕ್ಕೂ ಒಂದು ಬಗೆಯ ಅಸೂಯೆ, ಹಗೆತನ ಬೆಳೆದು ಬಂದುವು. ಬಿಹಾರಕ್ಕೂ ಇದೇ ಬಗೆಯ ಅಸಮಾಧಾನವಿತ್ತು ಬಂಗಾಲದ ಮೇಲೆ. ಹಿಂದುಸ್ತಾನಕ್ಕೆ ರಾಜಕೀಯ ಸುಧಾರಣೆಗಳ ದಾನವಾದಾಗ ಈ ಪ್ರಾಂತ ಗಳಿಗೂ ಮೋಕ್ಷ ದೊರೆಯಿತು. ಇರಲಿ.

ಗೋಪುಬಂಧು ದಾಸರು ದೇಶಸೇವೆಯ ಪ್ರತಿಜ್ಞೆ ಮಾಡಲು ಈ ಉತ್ಕಲ- ಬಂಗಾಲ ವೈಮನಸ್ಯವೂ ಒಂದು ಕಾರಣವಾಯಿತು. ಮುಂದೆ ಉತ್ಕಲದ ಮುಂದಾಳುಗಳೆನಿಸಿಕೊಂಡ ಪಂಡಿತ ನೀಲಕಂಠದಾಸರೂ ಹರಿಹರದಾಸರೂ ಗೋಪುಬಂಧುವಿನ ಜೊತೆಯಲ್ಲಿ ಓದುತ್ತಿದ್ದರು. ಮೂವರೂ ಸೇರಿ ಉತ್ಕಲ ಪ್ರಾಂತ ನಿರ್ಮಾಣದ ಕನಸನ್ನು ಕಟ್ಟಿದರು. ದೇಶಸೇವೆಯ ವ್ರತವನ್ನು ತೊಟ್ಟರು. ಆ ಕನಸು ಅವರ ಬಾಳಧರ್ಮ. ಆ ವ್ರತ ಅವರ ಬಾಳದಾರಿ.

ಅಂತೆಯೆ ಮೂವರೂ ಸೇರಿ ಈ ಸಂಕಲ್ಪ ಸ್ವೀಕಾರಸಂದರ್ಭದಲ್ಲಿ, ಭಾಗವತ ಸಪ್ತಾಹವನ್ನು ಆಚರಿಸಿದರು. ಉಪವಾಸ, ಪ್ರಾರ್ಥನೆಗಳಿಂದ ಪರಿಶುದ್ಧರಾಗಿ ಸಪ್ತಾಹಕ್ಕೆ ತೊಡಗಿದರು. ಗೋಪಬಂಧುವಿಗಂತೂ ಉಪವಾಸ ಧ್ಯಾನಗಳು ಬರು-ಬರುತ್ತ ದಿನಚರಿಯ ಕ್ರಮವಾಗಿ ಹೋದುವು.

ದೇಶಸೇವೆಯ ಹಂಬಲ ದಾಸರ ಓದಿಗೆ ಮೃತ್ಯುವಾಗಲಿಲ್ಲ. ಅವರ ಮದುವೆಯೇ ಅವರ ವಿದ್ಯಾಭ್ಯಾಸಕ್ಕೆ ಅಡ್ಡಬಂದಿರಲಿಲ್ಲ. ೧೨ನೆಯ ವಯಸ್ಸಿನಗೇ ಅವರಿಗೆ ಮದುವೆ. ಹೆಂಡತಿ ೮ ವರ್ಷದ ಬ್ರಾಹ್ಮಣಿ. ಆದರೂ ಓದು ನಿರ್ವಿಘ್ನವಾಗಿ ನಡೆದಿತ್ತು. ಈಗಂತೂ ಬೇಗ ಓದು ಮುಗಿಸಿ ತಾಯಿ ನಾಡಿಗೆ ಹಿಂದಿರುಗುವ ಆತುರ. ಆದರೆ ದಾಸರ ಬಿ. ಎ. ಮುಗಿವ ಹೊತ್ತಿಗೆ ಹೆಂಡತಿ ಸ್ವರ್ಗಕ್ಕೆ ಹೋದರು. ಬಿ. ಎ. ಪರೀಕ್ಷೆ ತೇರ್ಗಡೆಯಾದ ಸುದ್ದಿ ಬಂದದಿನವೇ ಆಕೆಯ ಸಾವಿನ ಸುದ್ದಿಯು ಬಂತು. 'ದೇವರಿಟ್ಟಂತೆ ಆಗಲಿ' ಎಂಬ ಭಾಗವತ ಸ್ವಭಾವ ದಾಸರದು. ಹೆಂಡತಿಯ ಸಾವಿನಿಂದ ಅಧೀರರಾಗಲಿಲ್ಲ.

ಮುಂದೆ ಉತ್ಕಲದಲ್ಲಿ ನೆಲೆಸಿ ವಕೀಲರಾದರು. ಶಾಸನಸಭೆಯ ಸದಸ್ಯರೂ ಆದರು. ಪೂರೀಕ್ಷೇತ್ರದಲ್ಲಿ ಅವರ ವಕೀಲಿ. ದಾಸರು ಹುಟ್ಟಾ ಬಡವರ ಬಂಧು. ವಕೀಲಿ ಅವರಿಗೆ ಹೇಗೆ ಸರಿಬೀಳಬೇಕು? ವಕೀಲಿ ಕೆಚ್ಚಲಿಗೆ ಹತ್ತಿದ ಉಣ್ಣೆಯ ಹಾಗೆ, ಮೈಗೆ ಅಂಟಿದ ಇಂಬಳದ ಹಾಗೆ. ಮನಸಿಗೆ ಒಲ್ಲದ ವಕೀಲಿ; ಮೈಗೆ ಒಗ್ಗದ ಪಟ್ಟಣವಾಸ. ಅವರ ಜೀವದ ಹಕ್ಕಿ ಆ ಪಂಜರವನ್ನು ಬಿಟ್ಟು ಹೆಚ್ಚು ಹೆಚ್ಚಾಗಿ ಹಳ್ಳಿಗಳ ಬಯಲಲ್ಲಿ, ಬಡಜನರ ವಿಶ್ವಾಸದ ಮುಗಿಲಲ್ಲಿ ಹಾರಾಡತೊಡಗಿತು. ಅವರ ಉತ್ಸಾಹ-ಸೌಜನ್ಯಗಳಿಗೆ ಸೋತು ಹತ್ತಾರು ಜನ ಹರಯದ ಹುಡುಗರು ಅವರ ಸುತ್ತ ಗುಂಪುಗಟ್ಟಿದರು. ದಾಸರು ಮನೆ ಮಠ ಮರೆತರು. ಮನೆಯಲ್ಲಿದ್ದ ತಾಯಿಲ್ಲದ ಒಂದು ಗಂಡು ಮಗು, ಇಬ್ಬರು ಹುಡುಗಿಯರನ್ನೂ ಮರೆತರು. ತಮ್ಮ ಸಂಗಾತಿಗಳಾದ ಹುಡುಗರ ಗುಂಪನ್ನು ಕಟ್ಟಿಕೊಂಡು. ಪೂರೀ ಜಿಲ್ಲೆಯ ಹಳ್ಳಿಗಳನ್ನೆಲ್ಲ ಸುತ್ತಿದರು. ಎಲ್ಲಿ ಜಾತ್ರೆಯಾದರೆ ಅಲ್ಲಿ ದಾಸರ ಸೇನೆ ಸಿದ್ಧ. ಉತ್ತರದೇಶದ ಜಾತ್ರೆಗಳಲ್ಲಿ ನೈರ್ಮಲ್ಯ ವ್ಯವಸ್ಥೆ ಬಹಳ ಕಡಿಮೆ. ಸಾಧಾರಣವಾಗಿ ಸುಂಕುರೋಗ ಬಂದೇ ಬರುತ್ತವೆ. ಆ ಪರದೇಶಿ ರೋಗಿಗಳಿಗೆ ದಾಸರ

ತಂಡವೇ ಗತಿ. ಜೀವದ ಆಶೆ ತೊರೆದು ಆ ಗುಂಪು ಮಾಡಿದ ಸೇವೆಗೆ ನಾಡಿಗೆ ನಾಡೇ ಮನಮೆಚ್ಚಿತು. ಗೋಪಬಂಧು ಉತ್ಕಲದ ಕಣ್ಣಾದರು, ಪ್ರಾಣ ಪದಕವಾದರು.

ಅಷ್ಟರಲ್ಲಿ ಪೂರೀ ಜಿಲ್ಲೆಯಲ್ಲಿ ಸಿಡಿಲಿನಂಥ ಬರಬಂತು. ಜನ ನೊಣ ಗಳಂತೆ ಸಾಯಹತ್ತಿದರು. ದಾಸರು ಇಟ್ಟ ಹೆಜ್ಜೆ ಇಟ್ಟಲ್ಲಿ ಇಡದೆ ನಾಡನ್ನೆಲ್ಲ ತಿರುಗಿದರು. ಜನ ಹೊಟ್ಟೆಗಿಲ್ಲದೆ ಸೊಪ್ಪು, ಸೆದೆ, ಹುಲ್ಲು ತಿನ್ನುವ ಗತಿಗೆ ಬಂದಿದ್ದರು. ಗೋಪಬಂಧು ಆಗ ಶಾಸನಸಭಾಸದಸ್ಯರು. ನೆಟ್ಟಗೆ ಶಾಸನ ಸಭೆಗೆ ಹೋದರು. ಹಳ್ಳಿ ಹಳ್ಳಿ ತಿರುಗಿದ ಧೂಳು, ಕಾಲಿನಮೇಲೆ ಮೋರೆಯ ಮೇಲೆ ಹಾಗೇ ಇತ್ತು. ಸಾಯುತ್ತಿದ್ದ ಕಂಗಾಲರು ತಿಂದು ಜೀವ ಹಿಡಿಯಲು ಹೋರಾಡುತ್ತಿದ್ದ ಹುಲ್ಲು, ಸೊಪ್ಪು ಕೈಯಲ್ಲೇ ಇತ್ತು. ಆ ಧೂಳನ್ನು ಸಭೆಗೆ ತೋರಿಸಿದರು. ಆ ಹುಲ್ಲನ್ನು ಅವರ ಮುಂದೆ ಹಾಕಿದರು. ಅಂದಿನ ಅವರ ಭಾಷಣ ಒಂದು ದಿವ್ಯ ಕಾವ್ಯ— ಕರುಣೆಯ ಗೀತೆ. ಆ ಮಹಾಜೀವದ ಎದೆಯ ಸಂಕಟವೆಲ್ಲ ಹೊನಲಾಗಿ ಹರಿಯಿತು.

ಸರಕಾರ ನಡುಗಿ ಹೋಯಿತು. 'ಇಂಥ ಭೀಕರದಲ್ಲೂ ಆಡಳಿತಕ್ಕೆ ದಯೆ ಬೇಡವೆ? ಇಷ್ಟು ವೈಮರವೆ?' ಎಂಬ ಗುಲ್ಲು ಎಲ್ಲ ಕಡೆಯಿಂದಲೂ ಕೇಳಬಂತು. ಗವರ್ನರ್ ತಾನೇ ಸ್ವಯಂ ಆ ಪ್ರಾಂತಕ್ಕೆ ಓಡಿಬಂದ. ಕ್ಷಾಮನಿವಾರಣೆಗೆ ಪ್ರಯತ್ನವೂ ಚುರುಕಾಗಿ ನಡೆಯಿತು.

ಆದರೆ ದಾಸರ ಮನಸ್ಸು ಶಾಸನಸಭೆ, ಪಟ್ಟಣಗಳಲ್ಲಿ ಇರಲಿಲ್ಲ. ಹಳ್ಳಿ ಗಳಲ್ಲಿ ಸುತ್ತಾಡಿದಾಗ ಅವರ ಮನಸ್ಸಿನಲ್ಲಿ ಮೂಡಿದ ಆಸೆ: ಮೊದಲು ಹುಡುಗರ ಶಿಕ್ಷಣ ಸರಿಯಾಗಬೇಕು, ಅದೇ ಎಲ್ಲ ಸುಧಾರಣೆಯ ತಳಹದಿ ಎಂಬುದು. ಒಡನೆಯೆ ಪೂರೀಗೆ ೨೦ ಮೈಲು ದೂರದ ಹಳ್ಳಿಯೊಂದರಲ್ಲಿ ಒಂದು ಚಿಕ್ಕ ಶಾಲೆಯನ್ನು ಮೊದಲು ಮಾಡಿದರು. ದಿನವೂ ಆ ಹಳ್ಳಿಗೆ ಹೋಗಿ ಶಾಲೆಯ ಏರ್ಪಾಡನ್ನು ನೋಡಿಕೊಳ್ಳುತ್ತಾ, ತೆರವಾದಾಗ ವಕೀಲಿ ಮಾಡುತ್ತ ಬದುಕು ಸಾಗಿಸಿದರು. ಮೊದಲು ೧೬ ಜನ ಹುಡುಗರೇ. ಸರಕಾರ ಆ ಶಾಲೆಗೆ ಒಪ್ಪಿಗೆ ಕೊಡಲಿಲ್ಲ. ಆದರೂ ಗೋಪಬಂಧು ತಮ್ಮ ಹಿಡಿತ ಸಡಿಲಿಸಲಿಲ್ಲ. ಶಾಲೆಯನ್ನು ನಡಿಸಿದರು. ಕೊನೆಗೆ ಆಡಳಿತ ಒಪ್ಪಿಗೆ ಕೊಡಬೇಕಾಯಿತು. ಆ ಶಾಲೆ ಹೈಸ್ಕೂಲೂ ಆಯಿತು. ಹೊರಗಿನಿಂದ ಚಂದಾಹಣ ತಂದು

ತುಂಬುವ ಅಗತ್ಯವಿಲ್ಲದೆ, ತನ್ನ ವೆಚ್ಚ ತಾನೇ ಗಳಿಸುವ ಹಾಗಾಯಿತು. ಆದರೆ ಆ ಶಾಲೆ ಬಹಳ ದಿನ ಉಳಿಯಲಿಲ್ಲ. ಮೂರು ತಿಂಗಳೊಳಗಾಗಿ ಅದಕ್ಕೆ ಬೆಂಕಿಬಿದ್ದು ಸುಟ್ಟು ಹೋಯಿತು. ಆದರೂ ಗೋಪಬಂಧು ಧೈರ್ಯಗೆಡಲಿಲ್ಲ. ಅದನ್ನೆ ಗುರುಕುಲದ ಪದ್ಧತಿಗೆ ತಿರುಗಿಸಿದರು. ಬಯಲಲ್ಲಿ ಗಿಡಮರಗಳ ಕೆಳಗೆ ಶಾಲೆ ಹೂಡಿದರು.

ಇಲ್ಲಿಗೆ ದಾಸರ ಜೀವಕ್ಕೆ ವಕೀಲಿಯ ಸಂಕೋಲೆ ಬೇಡಾಗಿತ್ತು. ದೇವರು ಒಲಿದ ಜೀವರಿಗೆ ಎಲ್ಲವೂ ಅನುಕೂಲವೆ. ೧೯೧೭ಕ್ಕೆ ಆ ಪ್ರಾಂತ ದಲ್ಲಿ ಸತ್ಯಾಗ್ರಹದ ಗಾಳಿ ಬೀಸಿತು. ದಾಸರು ಆ ಹೊಳೆಯಲ್ಲಿ ಕೂಡಲೆ ಇಳಿದರು. ರಾಷ್ಟ್ರೀಯ ಶಿಕ್ಷಣವೆಂದು ಗಾಂಧೀಜೀ ಹೊಸ ವಿದ್ಯಾವಿಧಾನವನ್ನು ಪ್ರಸಾರ ಮಾಡುತ್ತಿದ್ದ ಕಾಲ. ಎಲ್ಲ ಪ್ರಾಂತಗಳಲ್ಲೂ ರಾಷ್ಟ್ರೀಯ ವಿದ್ಯಾ ಪೀಠಗಳು ಮೊದಲಾದವು. ಗೋಪಬಂಧುವಿನ ಕನಸಿಗೆ ಒಂದು ರೂಪು ಸಿಕ್ಕಂತಾಯಿತು. 'ಉತ್ಕಲ ಸ್ವರಾಜ್ಯ ಶಿಕ್ಷಾಪೀಠ' ಮೊದಲಾಯಿತು. ಶಾಂತನಿಕೇತನದ ಮಾದರಿ. ತಮಾಲ ಗಿಡಗಳ ವನದಲ್ಲಿ ವಿದ್ಯಾಪೀಠ, ಕಟ್ಟಡ ಗಳೆಂದರೆ ಎಲ್ಲಾ ಗುಡಿಸಿಲೇ, ಗಿಡಗಳ ನೆರಳಲ್ಲಿ ನೆಲದಾಯಿಯ ಮಡಿಲಲ್ಲಿ ಕೂತು ಅಧ್ಯಯನ. ಬೋರೇಗೌಡನಿಗೆ ಪಡುವಲ ದೇಶದವರ ಹಾಗೆ ಕಟ್ಟಡ, ಕುರ್ಚಿ–ಮೇಜುಗಳೇಕೆ ಬೇಕು. ಆ ಪ್ರಾಂತದ ವಿದ್ಯಾಧಿಕಾರಿಗಳು ವಿದ್ಯಾ ಪೀಠವನ್ನು ಬಂದು ನೋಡಿದರು; ಬಹಳ ಸಂತಸಗೊಂಡರು: 'ನಾಡಿನ ಶಾಲೆಗಳೆಲ್ಲ ಹೀಗೆ ನಿರಾಡಂಬರವಾಗಿ ಸರಳವಾಗಿ ನಡೆದರೆ ನಾಡಿನ ಭಾಗ್ಯೋ ದಯವಾದೀತು' ಎಂದು ಬರೆದರು.

ಉತ್ಕಲದ ತರುಣರೆಲ್ಲ ದಾಸರ ಸುತ್ತ ನೆರೆದರು. ಬಿಸಿನೆತ್ತರಿನ ಹೊಸ ಹರಯಕ್ಕೆ ಹಾದಿತೋರಿ, ಅವರ ಬಾಳಿಗೆ ರೂಪುಗೊಟ್ಟು ಗೋಪಬಂಧು ಉತ್ಕಲದ ಆಚಾರ್ಯರಾದರು. 'ಉತ್ಕಲದ ದ್ರೋಣಾಚಾರ್ಯ'—ಎಂದರು ಜನ ಭಕ್ತಿಯಿಂದ. ಕಾಂಗ್ರೆಸ್ ಚಳುವಳಿ ಬಲವಾಗಿ ವಿಜೃಂಭಿಸಿದ ಕಾಲ ಅದು. ಉತ್ಕಲದ ತರುಣಮಂಡಲಿಯೆಲ್ಲ ಆಚಾರ್ಯರ ಕೈಯುಗೊಂಬೆಗಳಂತೆ ನಡೆದುಕೊಂಡರು. ವಿದ್ಯಾಪೀಠದ ವನದಲ್ಲಿ ಆಚಾರ್ಯ ಗೋಪಬಂಧು ಹಾಕಿದ ಸ್ವರಾಜ್ಯ ಊರೂರಿನಲ್ಲೂ ಹರಡಿತು; ಅಲ್ಲಿ ಹಾಡಿದ ಸ್ವಾತಂತ್ರ್ಯಗೀತೆ ಹತ್ತು ದಿಕ್ಕಿನಲ್ಲೂ ಮೊಳಗಿತು. ಜೈಲಿಗೆ ಹೋಗುವ ಸರದಿ ಬಂದಾಗ ಉತ್ಕಲದ

ತರುಣರೆಲ್ಲ ಸೆರೆಮನೆಗೆ 'ನಾನು ಮುಂದೆ ತಾನು ಮುಂದೆ' ಎಂದು ಹೋದರು. ಆಗ ತಯಾರಾದ ಗುಂಪೇ ಈಗಲೂ ಉತ್ಕಲದ ಕಾಂಗ್ರೆಸ್ಸಿನ ತಳಹದಿ. ಅವರೇ ಅದರ ಜೀವಾಳ. ಗೋಪಬಂಧುವಿಗೂ ೨ ವರ್ಷ ಸೆರೆಯಾಗಿತ್ತು.

ಉತ್ಕಲ ಪ್ರಾಂತಕ್ಕೆ ಗಾಂಧೀಜೀ ಬಂದಾಗ ಅವರ ದೃಷ್ಟಿಗೆ ದಾಸರು ಬೀಳದಿರಲಿಲ್ಲ. 'ಉತ್ಕಲದಲ್ಲಿ ಕೆಲಸಗಾರರೂ ಇದಾರೆ. ಶಾಸನ ಸಭಾಸದಸ್ಯ, ವಕೀಲ, ಇನ್ನೂ ಅದು ಇದು ಆಗಿದ್ದ ಗೋಪಬಂಧು ದಾಸರು ನಿಃಸ್ವಾರ್ಥಿ ಯಾದ ಒಳ್ಳೆಯ ಮುಂದಾಳು. ಅವರೂ ಅವರ ಸಂಗಡಿಗರೂ ಬರೀ ಅಕ್ಕಿ ಬೇಳೆಯಿಂದಲೇ ನಿರ್ವಾಹ ಮಾಡುತ್ತಿದಾರಂತೆ. ತುಪ್ಪ ಅವರು ಕಾಣಲೇ ಕಾಣರು. ಅಸಹಕಾರದ ಚಳವಳಿ ಬಂದಮೇಲಂತೂ ಅಲ್ಲಿಯ ಕೆಲಸಗಾರರು ತಮ್ಮ ವೇತನವನ್ನೂ ತೀರ ಕನಿಷ್ಠಕ್ಕೆ—ತಿಂಗಳಿಗೆ ಹತ್ತು ರೂಪಾಯಿಗೆ— ಇಳಿಸಿದಾರೆ. ಇಂಥ ಶ್ರದ್ಧಾಳುಗಳಿದ್ದರೆ ಒಂದು ವರ್ಷದೊಳಗಾಗಿಯೇ ಸ್ವರಾಜ್ಯ ಬರುವದರಲ್ಲಿ ಏನು ಆಶ್ಚರ್ಯ? ಪೂರೀಗೆ ೧೨ ಮೈಲು ದೂರದಲ್ಲಿಯೆ ಸಖಿಗೋಪಾಲದಲ್ಲಿ ಪಂಡಿತ ಗೋಪಬಂಧುದಾಸರ ಬಯಲುಮಠ ಇದೆ. ಅದು ವನದ ಶಾಲೆ. ನೋಡಬೇಕಾದ ಸಂಸ್ಥೆ. ಹುಡುಗರ, ಶಿಕ್ಷಕರ ನಡುವೆ ನಾನು ಒಂದು ದಿನವನ್ನು ಬಹಳ ಆನಂದವಾಗಿ ಕಳೆದೆ. ಅದೊಂದು ದೊಡ್ಡ ಪ್ರಯೋಗ. ಕೆಲವರು ಹುಡುಗರು ಚೆಲೋ ವ್ಯಾಯಾಮಪಟುಗಳಾಗಿದ್ದಾರೆ' ಎಂದು ಬರೆದರು ಗಾಂಧೀಜೀ. ಅನಗತ್ಯವಾದ ಒಂದೇ ಒಂದು ಮಾತನ್ನು ಗಾಂಧೀಜೀ ಬರೆಯುವವರಲ್ಲ.

ಗಾಂಧೀಜೀ ಹಿಂದುಸ್ಥಾನದ ಭಾಗ್ಯವಿಧಾತರಾದ ಮೇಲೆ ಗೋಪಬಂಧು ಬಹಳ ದಿನ ಇರಲಿಲ್ಲ. ೧೯೨೮ರಲ್ಲಿ ಪಕ್ಷವಾತದಿಂದ ತೀರಿಕೊಂಡುಬಿಟ್ಟರು. ಅದಕ್ಕೆ ಮೊದಲೇ ಅವರ ಮಗನೂ ಹೋದ. ಗೋಪಬಂಧು ಕಣ್ಮರೆಯಾದ ದಿನ ಉತ್ಕಲದ ಜನರೆಲ್ಲ ಕಣ್ಣೀರು ಹರಿಸಿದರು. ಉತ್ಕಲಕ್ಕೇ ಏಕೆ ಹಿಂದುಸ್ಥಾನಕ್ಕೆ ಅಪಾರ ನಷ್ಟವಾಯಿತು. ಉತ್ಕಲದಲ್ಲಂತೂ ಆ ನೋವು, ಆ ನೆನಪು ಅಂದಿನಿಂದ ಇಂದಿನವರೆಗೂ ಇದೆ.

ಗಾಂಧೀಜಿಗಿಂತ ಆಂಡ್ರೂಸ್, ಲಾಲಾಜಿಗೆ ಹತ್ತಿರದವರು ಗೋಪಬಂಧು- ಇಬ್ಬರೂ ಲೋಕಸೇವಕ ಸಮಿತಿಯ ಸದಸ್ಯರು. ಸಾಯುವ ಮುನ್ನ ಗೋಪಬಂಧು ಆ ಸಮಿತಿಯ ಜಂಟಿ ಅಧ್ಯಕ್ಷರಾದರು, ಲಾಲಾಜಿಯ

ಜೊತೆಯಲ್ಲಿ. ಗೋಪಬಂಧುವಿನ ಸರಳ ನಿರಾಡಂಬರ ಜೀವನ, ಜಗದ್ಧಿತಕ್ಕಾಗಿ ಅರ್ಪಿಸಿದ ಅವರ ಹೃದಯ, ತಡೆ–ಬಿಡುವು ಇಲ್ಲದ ಅವರ ದೇಶಸೇವಾ ನಿಷ್ಠೆಗಳನ್ನು ಲಾಲಾಜಿ ಚೆನ್ನಾಗಿ ಗುರುತಿಸಿದ್ದರು. 'ವಿಗ್ರಹವನ್ನು ಕಡೆದು ನಯಮಾಡಿ, ಪ್ರತಿಷ್ಠಿಸಿ ಪೂಜೆ ಸಲಿಸಬೇಕು ಎನ್ನುವುದರೊಳಗಾಗಿ ವಿಗ್ರಹವೇ ಮಾಯವಾಗಬೇಕೆ' ಎಂದು ಮರುಗಿದರು. ಹೌದು. ಗೋಪಬಂಧುವಿಗೆ ಸರಿಯಾದ ರಾಷ್ಟ್ರೀಯ ಗೌರವ ಸಿಗಬೇಕಾದ ಸಂದರ್ಭ ಬಂದಾಗ, ಅವರೇ ಕಣ್ಮರೆಯಾದರು.

ಆಂಡ್ರ್ಯೂಸರದು ಗೆಳೆತನ. ದಾಸರು ಶಾಂತಿನಿಕೇತನಕ್ಕೆ ಅವರಿಗಾಗಿ ಹೋಗುತ್ತಿದ್ದರು; ಆಂಡ್ರ್ಯೂಸರು ದಾಸರನ್ನು ನೋಡಲು ಪೂರಿಗೆ ಬರುತ್ತಿದ್ದರು. ಬಂದಾಗ ಇವರಲ್ಲೇ ಬಿಡಾರ. ಆಗ ಗೋಪಬಂಧುವಿನ ಅಂತರಂಗವನ್ನು ಚೆನ್ನಾಗಿ ಅರಿತುಕೊಂಡರು. ಅವರ ದೀನಸೇವೆಯ ಹಸಿವನ್ನು ನೋಡಿದರು. ಅವರಿಗೆ ಬೇಸಿ–ಬೇಸರಿಕೆಯೆಂದರೆ ಲಕ್ಷ್ಯವಿರಲಿಲ್ಲ. ಗೋಪಬಂಧುವಿಗೆ ಸೇವೆಯುವಿನಾ ಬೇರೆ ಚಿಂತೆ ಇರಲಿಲ್ಲ. ಎಷ್ಟೋ ಸಲ ಮೈ ಜ್ವರದಿಂದ ಸುಡುತ್ತಿರುವಾಗಲೇ ಮಳೆಯಲ್ಲಿ ನೀರಿನಲ್ಲಿ ಹಳ್ಳಿಗಳನ್ನು ಸುತ್ತಿದಾರೆ. 'ಉತ್ಕಲದಲ್ಲಿದ್ದರೆ ನಾವು ಒಬ್ಬರನ್ನೊಬ್ಬರು ಬಿಟ್ಟಿರಲು ಆಗುತ್ತಿರಲಿಲ್ಲ' ಎಂದು ಬರೆದಿದಾರೆ ಆಂಡ್ರ್ಯೂಸರು.

ಅಸಹಕಾರದ ಚಳವಳಿ ಹರಡಿದಾಗ, 'ಉತ್ಕಲ ಸ್ವರಾಜ್ಯ ಶಿಕ್ಷಾಪೀಠ'ವನ್ನು ನಿಲ್ಲಿಸಬೇಕಾಯಿತು. ಶಾಂತಿನಿಕೇತನ, ಗುಜರಾತ ವಿದ್ಯಾಪೀಠಗಳನ್ನು ಉಳಿದು ಇತರ ವಿದ್ಯಾಪೀಠಗಳೆಲ್ಲ ಇದೇ ಗತಿಗೆ ಬಂದುವು. ತಮ್ಮ ಬಾಳಬಯಕೆಯ ಹಣ್ಣಾದ ಆ ಆಶ್ರಮವನ್ನು ನಿಲ್ಲಿಸಬೇಕಾಗಿ ಬಂದಾಗ, ದಾಸರಿಗೆ ಆದ ನೋವು ರಾಜ್ಯ ಕಳೆದುಕೊಂಡ ರಾಜರಿಗೂ ಆಗಿರಲಿಕ್ಕಿಲ್ಲ. ತಪೋಧನವನ್ನೇ ಕಳೆದುಕೊಂಡ ಋಷಿಯಂತಾಯಿತು ಅವರ ಸ್ಥಿತಿ. ಗೋಪಬಂಧು ಸೆರೆಗೆ ನುಗ್ಗಿದರು. ಎರಡು ವರ್ಷದ ತರುವಾಯ ಹೊರಗೆ ಬಂದರೂ ಅವರ ಮೈ ಹಣ್ಣಾಗಿತ್ತು. ಸ್ವಲ್ಪಕಾಲದಲ್ಲಿಯೆ ಕಣ್ಣು ಮುಚ್ಚಿದರು. ಅವರ ಆತ್ಮ ಉತ್ಕಲದ ರೈತರ ಬಡವರ ಮನಸಿನಲ್ಲಿ ಸೇರಿಹೋಯಿತು.

ಈಗಲೂ ಮಹಾನದಿ–ಕಾಟಜೋರಿಯ ಮಹಾಪೂರ ಅವರ ನೆನಪು ಕೊಡುತ್ತದೆ. ನಾಡಿಗೆ ನಾಡೇ ನೀರಲ್ಲಿ ಮುಳುಗಿದಾಗ ದಾಸರಿಗೆ ಅನ್ನ–

ನಿದ್ದೆಯಿಲ್ಲ, ಬಿಡುವಿಲ್ಲ. ಹೆಮ್ಮಳೆಯಲ್ಲಿಯೂ ಹಳ್ಳಿಗಳಿಗೆ ಹೋಗಬೇಕಾಯಿತು. ಮಳೆ ನಿಲ್ಲುವವರೆಗೆ ತಡೆದರೆ ಮುಳುಗಿ ಹೋದ ಹಳ್ಳಿಗಳಿಗೆ ದಿಕ್ಕೇ ಇಲ್ಲವಾದೀತು. ರಾತ್ರಿಯ ಹೊತ್ತು, ನದಿಯ ಪ್ರಯಾಣ. ದೋಣಿ ನಡೆಸುವವನು ಹೆದರಿದ. ದಂಡೆ ಎಷ್ಟು ಹುಡುಕಿದರೂ ಸಿಗದು. ಪದೇ ಪದೇ ದೋಣಿ ತಲೆಕೆಳಗಾಗುತ್ತಿದೆ. ಇಂಥದರಲ್ಲೂ ಒಂದು ಹಳ್ಳಿಗೆ ತಲುಪಿದರು. ಅಲ್ಲಿ ಒಂದು ಗುಡಿಸಿಲಲ್ಲಿ ಆ ಹಳ್ಳಿಯ ಜನ ತಂದುಕೊಟ್ಟ ಬಟ್ಟೆಯುಟ್ಟು ರಾತ್ರಿ ಕಳೆದರು. ಬೆಳಗ್ಗೆ ನೋಡುವಾಗ ಆ ಹಳ್ಳಿಯೊಂದು ದ್ವೀಪ. ಆದರೂ ಗೋಪಬಂಧು ಧೃತಿಗೆಡಲಿಲ್ಲ; ಸೇವೆಯ ಹುರುಪು ಅಂಥದು.

ಕಾಟಜೋರಿ ನದಿ ದಾಸರ ರಸಜೀವವನ್ನೂ ನೆನಪಿಗೆ ತರುತ್ತದೆ. 'ಕಾಟಜೋಡಿಮೆ ಸಂಧ್ಯಾ,' 'ಪಾವಸ್‌ಮೆ ಕಾಟಜೋಡಿ' ಎಂಬ ಅವರ ಕವನ ಹೃದಯಸ್ಪರ್ಶಿಯಾಗಿವೆ. ಹುಟ್ಟಿದ ಹಳ್ಳಿಯಲ್ಲಿ ಅಯ್ಯನವರ ಸಾಲೆಯಲ್ಲಿ ಕಲಿವಾಗಲೇ ಗೋಪಬಂಧು ಕವಿತೆ ಹೇಳುತ್ತಿದ್ದರು. ಒಳ್ಳೆ ಚುರುಕು ಬುದ್ಧಿ. ಆಗಲೆ ಮೊಳಕೆಯೊಡೆದಿತ್ತು. ತಮ್ಮ ಲೋಕಸೇವೆಗೆ ಸಾಹಿತ್ಯಕರ್ಮವೂ ಅಗತ್ಯವೆಂದು ಅವರು ಪತ್ರಿಕಾನಿರ್ವಹಣಕ್ಕೆ ತೊಡಗಿದಾಗ, ಉತ್ಕಲದ ನುಡಿಯಲ್ಲಿ ಒಂದು ಕ್ರಾಂತಿಯೆ ಆಯಿತು. ಗದ್ಯಕ್ಕೆ ಗಡುಸಾದ ವ್ಯಾವಹಾರಿಕ ಭಾಷೆಯನ್ನೂ ಬಳಸಿದರು. ಉತ್ಕಲದಲ್ಲಿ ಅವರ ಪತ್ರಿಕೆಯೆ ಮೊದಲನೆಯದು. ಶೈಲಿ ಹೊಸದು. ಮುಂದೆ ಆ ಪದ್ಧತಿ ಬೆಳೆದು ಬಂತು. 'ಬಂದೀರ್ ಆತ್ಮಕಥಾ,' 'ಧಾರಾ ಕವಿತಾ' ಪುಸ್ತಕಗಳು ಅವರ ಶೈಲಿಯ ಗುರುತಾಗಿವೆ.

ಅವರ ಸರ್ವ ಪ್ರಭಾವದ ಆಧಾರ ಅವರ ದೈವಭಕ್ತಿ. ಅದೇ ಅವರ ಅಖಂಡ ತ್ಯಾಗದ ಚಿಲುಮೆ. ಧ್ಯಾನ–ಆರಾಧನೆಗಳಲ್ಲಿ ಅವರಿಗೆ ಪೂರಾ ನಿಷ್ಠೆ. ಬ್ರಾಹ್ಮಣನ ಶುದ್ಧ ಹೃದಯ ಅವರದು. ಬಾಳೂ ಬ್ರಾಹ್ಮಣನದು.

ದಾಸರು ತಮ್ಮ ಚೂರುಪಾರು ಸೊತ್ತನ್ನು ಸಾರ್ವಜನಿಕ ಸೇವೆಗೆ ಅರ್ಪಿಸಿದರು. ಅವರ ಸಾಲಕ್ಕಾಗಿ ಅದೆಲ್ಲ ಹರಾಜಾಯಿತು. ನಮ್ಮ ನಾಡಿನ ಮಹಾಪುರುಷರಿಗೆ ನಾವು ತೋರುವ ಗೌರವ ಅದು. ಅವರ ಸೊತ್ತನ್ನು ರಾಷ್ಟ್ರೀಯ ಸ್ಮಾರಕವಾಗಿ ಉಳಿಸಿಕೊಳ್ಳುವ ಅಭಿಮಾನವೂ ನಮಗಿಲ್ಲ.

# ಸಿ. ವಿ. ರಾಮನ್

**ಕ**ಡಲು ನೋಡಿದೀರ ನೀವು? ಅದರ ನೀರಿನ ಬಣ್ಣ ಯಾವುದು ಗೊತ್ತೆ? ನೀಲಿ, ಮುಗಿಲ ಬಣ್ಣ. ನಕ್ಷೆಗಳಲ್ಲಾದರೂ ನೋಡಿರಬೇಕು. ಕಡಲು ಆಳವಾದಂತೆ ಬಣ್ಣಗಟ್ಟಿ ನೀಲಿ. ಅದೇ ಕಡಲ ಅಂಚಿನಲ್ಲಿ ನಿಂತು ನೋಡಿದರೆ, ಕಡಲು ಕಾಮನಬಿಲ್ಲು ಬಣ್ಣದಂತೆ. ಮನೆಯಲ್ಲಿ ತಿಳಿನೀರಿಗೆ ಬಣ್ಣ ಇದೆಯೆ? ಹಾಗಾದರೆ ನೀರಿಗೆ ಬಣ್ಣ ಇದೆಯೋ ಇಲ್ಲವೋ? ಇಲ್ಲ ದಿದ್ದರೆ ಕಡಲಲ್ಲಿ ಕಾಣುವ ಬಣ್ಣ ಎಲ್ಲಿಯದು? ಯಾವುದರ ಬಣ್ಣ ಅದು?

ನಮಗೆ ಈ ಪ್ರಶ್ನೆ ಹೊಳೆಯಲಿಕ್ಕಿಲ್ಲ. ಸಿ. ವಿ. ರಾಮನ್‌ರಂತೆ ನಾವೂ ಕಡಲತಡಿಯ ಊರಲ್ಲೇ ಬೆಳೆದಿರಬಹುದು; ದಿನವೂ ಕರೆಯಲ್ಲಿ ನಿಂತು ಕಡಲ ಬಣ್ಣದ ಮಯೂರ ನಾಟ್ಯವನ್ನು ಕಣ್ಣು ತುಂಬ ನೋಡಿರಲೂಬಹುದು; ವೆಂಕಟರಾಮನ್ ಓದಿದಂತೆ ವಿಜ್ಞಾನವನ್ನು ಬಲು ಪ್ರೀತಿಯಿಂದ ಓದಿರ ಬಹುದು; ಕಾಲೇಜಿನಲ್ಲಿ ವಿಜ್ಞಾನಶಾಸ್ತ್ರದ ಪಂಡಿತರನ್ನೆ ಬೆರಗುಗೊಳಿಸುವ ವಿದ್ಯಾರ್ಥಿಯಾಗಿರಬಹುದು; ೧೬ ವರ್ಷಕ್ಕೆ ಬಿ. ಎ. ಆಗಲೂಬಹುದು; ರಾಮನ್‌ಗಿದ್ದ ಎಲ್ಲ ಗೆರೆಯೂ ಇದ್ದೀತು. ಆದರೆ ಸೃಷ್ಟಿರಹಸ್ಯವನ್ನು ಗಮನಿಸಿ, ಅದನ್ನು ಪರಿಶೋಧಿಸುವ ಈ ಆಸೆ, ಸಾಮರ್ಥ್ಯ ಮಾತ್ರ ಪ್ರತಿಭೆಯ ವೈಶಿಷ್ಟ್ಯ. ವೆಂಕಟರಾಮನ್ ನಿಜವಾಗಿ ಪ್ರತಿಭಾಶಾಲಿ. ಈ ಸಮಸ್ಯೆಗೆ ಆತ ಉತ್ತರ ಹುಡುಕಿದರು.

ಕಡಲನೀರಿನ ಬಣ್ಣ ನೀರಿನದಲ್ಲ; ಅದರ ಮೇಲೆ ಬೀಳುವ ಸೂರ್ಯನ ಬೆಳಕಿನದು. ಪ್ರಖರವಾದ ಆ ಬೆಳಕು ನೀರಿನಲ್ಲಿ ಮುಳುಗಿ ಕರಗಿಹೋದಾಗ ಈ ಬಣ್ಣ ಹುಟ್ಟಿತು. ಈ ವೈವಿಧ್ಯಕ್ಕೆ ಕಾರಣ ಬೆಳಕಿನ ಕಿರಣಗಳ ಆಟ. ಈ ಸಂಗತಿಯೆ ವೆಂಕಟರಾಮನ್‌ರ ವೈಜ್ಞಾನಿಕ ವಿಜಯದ ತಳಹದಿ; ಅವರು ೧೯೧೭ ರಿಂದ ೧೯೩೨ ರ ತನಕ ಹದಿನೈದು ವರ್ಷಕಾಲ ನಡೆಸಿದ ಅಖಂಡ ಪರಿಶೋಧನೆಯ ಮೂಲಾಧಾರ.

೧೯೦೬ರಲ್ಲಿಯೆ, ಇನ್ನೂ ಎಂ. ಎ. ತರಗತಿಯಲ್ಲಿ ಓದುತ್ತಿರುವಾಗಲೆ ೧೮ ವರ್ಷದ ಪ್ರಾಯಕ್ಕೆ-ವೆಂಕಟರಾಮನ್ ತನ್ನ ಪ್ರಯೋಗಜೀವನ ಪ್ರಾರಂಭ

ಮಾಡಿದರು. ಆಂಧ್ರದೇಶದ ವಾಲ್ಟೇರಿನಲ್ಲಿ, ಕಡಲೂ ಬಾನೂ ಸೇರಿ ದೂರದಲ್ಲಿ ಆಡುತ್ತಿದ್ದ ಬಿಸಿಲುಕೋಲಾಟವನ್ನು ಎಳೆತನದಿಂದ ನೋಡಿದ ರಾಮನ್‌ಗೆ ಬೆಳಕಿನ ಕಣ್ಣುಮುಚ್ಚಾಲೆಯೆ ಪ್ರಯೋಗವಸ್ತುವಾಯಿತು. ಅವರ ತಂದೆ, ಚಂದ್ರಶೇಖರ ಅಯ್ಯರ್, ಅಲ್ಲಿ ಭೌತಶಾಸ್ತ್ರದ ಅಧ್ಯಾಪಕರು. ಮನೆತನ ಚಲೋ ಪಂಡಿತರದು. ಅವರ ತಾತ–ತಾಯಿತಂದೆ–ವಂಗದೇಶ ಯಾತ್ರೆಮಾಡಿದ ನ್ಯಾಯಶಾಸ್ತ್ರ ಪಂಡಿತರು.

ಎಂ. ಎ. ಪರೀಕ್ಷೆಯಲ್ಲಿ ಪ್ರಥಮ ತರಗತಿ. ಭೌತಶಾಸ್ತ್ರದಲ್ಲಿ ಅಷ್ಟು ಗುಣ ಇನ್ನೂ ಯಾರೂ ತೆಗೆದಿಲ್ಲ, ಮದರಾಸು ವಿಶ್ವವಿದ್ಯಾನಿಲಯದಲ್ಲಿ. ಆದರೆ ವಿಜ್ಞಾನದಿಂದ ಲೇಸಾಗಿ ಹೊಟ್ಟೆಹೊರೆಯಲು ಪರಿಸ್ಥಿತಿ ಅನುಕೂಲವಾಗಿರಲಿಲ್ಲ ಆಗ. ಇಂಗ್ಲೆಂಡು ಪ್ರವಾಸವಿಲ್ಲದೆ ಪ್ರತಿಭಾಶಾಲಿಗಳಾದ ಹಿಂದೂಸ್ಥಾನೀ ಜನಕ್ಕೆ ಸಿಗುತ್ತಿದ್ದ ಚಲೋ ಕೆಲಸವೆಂದರೆ ಆರ್ಥಿಕ ಶಾಖೆಯೊಂದರಲ್ಲೆ. ರಾಮನ್ ಆ ಪರೀಕ್ಷೆಗೆ ಕೂತರು. ಪ್ರಥಮಸ್ಥಾನ ಅವರಿಗಾಗಿ ಕಾದು ನಿಂತಿತ್ತು. ಸರಿ; ಹಿಂದೀ ಸರಕಾರದ ಅರ್ಥಶಾಖೆಯಲ್ಲಿ ಅಧಿಕಾರಿಯಾದರು. ಹತ್ತು ವರ್ಷಕಾಲ, ೧೯೧೭ರ ತನಕ ಅದು ನಡೆಯಿತು. ಕಲಕತ್ತೆ, ರಂಗೂನು, ನಾಗಪುರಗಳಿಗೆ ತಿರುಗಬೇಕಾಯಿತು. ಅದರಲ್ಲೂ ರಾಮನ್ ಸುಮ್ಮನೆ ಕೂಡಲಿಲ್ಲ. ವಿಮಾಪದ್ಧತಿ, ನಾಣ್ಯಚಲಾವಣೆ, ಬ್ಯಾಂಕಿನ ವ್ಯವಸ್ಥೆ, ಸರಕಾರದ ಆಯವ್ಯಯ ಪಟ್ಟಿಯ ರೀತಿ–ಎಲ್ಲವನ್ನೂ ಕೂಲಂಕಷವಾಗಿ ತಿಳಿದುಕೊಂಡರು. ಯಾವ ದಾರಿಯಲ್ಲಿ ಬಿಟ್ಟರೂ ಜಾತಿಕುದುರೆಯ ನಡಿಗೆ ಅದರದೇ. ಮೇಲಿನವರಿಗೆ ಇವರ ಜಾಣ್ಮೆ ತಿಳಿದು ಮೇಲು ಪದವಿಗೇರಿಸಲು ಬಯಸಿದರು. ರಾಮನ್ ಅದಕ್ಕೊಪ್ಪಲಿಲ್ಲ. ಅಷ್ಟುಹೊತ್ತಿಗೆ ಅವರ ಬದುಕು ಬೇರೆ ದಾರಿ ಹಿಡಿಯಿತು. ಕೊಳ್ಳದಲ್ಲಿ, ಕಾಡಿನಲ್ಲಿ ಹರಿಯುತ್ತಿದ್ದ ಅವರ ವಿಜ್ಞಾನಪ್ರಯೋಗದ ಪ್ರೀತಿಗೆ ವಿಶಾಲವಾದ ಮೈದಾನ ದೊರೆಯಿತು. ಒಮ್ಮಿಂದೊಮ್ಮೆಗೆ ನದಿ ಅಗಲವಾಗಿ, ಜನರಿಗೆ ಉಪಯೋಗವಾಗಿ, ಕಣ್ಣಿಗೆ ಹಬ್ಬವಾಗಿ ಹರಿಯತೊಡಗಿತು.

ಆ ಸಂದರ್ಭ ಹೀಗೆ: ಅರ್ಥಶಾಖೆಗೆ ಸೇರಿದರೂ ರಾಮನ್ ತಮ್ಮ ವಿಜ್ಞಾನ ಪ್ರಯೋಗದ ರುಚಿಯನ್ನು ಕಳೆದುಕೊಳ್ಳಲಿಲ್ಲ. ಬಿಡುವಾದಾಗಲೆಲ್ಲ ಕಲಕತ್ತೆಯ ಭಾರತೀಯ ವಿಜ್ಞಾನ ಸಂಘದ ಪ್ರಯೋಗಶಾಲೆಗೆ ಹೋಗಿ ತಮ್ಮ

ಪ್ರಯೋಗಗಳನ್ನು ನಡಸುತ್ತ ಬಂದರು. ರಂಗೂನ್, ನಾಗಪುರಗಳಲ್ಲಿದ್ದಾಗ ತಮ್ಮ ಮನೆಯೇ ಪ್ರಯೋಗಶಾಲೆ. ಅಲ್ಲಿ ಅವರ ಹರಿತವಾದ ಬುದ್ಧಿಯಲ್ಲಿ ಮೂಡಿದ ಸ್ವತಂತ್ರ ವಿಚಾರಲಹರಿ ಅಲೆಅಲೆಯಾಗಿ ಹೊರಬೀಳುತ್ತಲೇ ಇತ್ತು. ಈ ಲೆ.ಖನಗಳನ್ನೆಲ್ಲ ಕಲಕತ್ತೆಯ ವಿಶ್ವವಿದ್ಯಾನಿಲಯದ ಸ್ಥಾನಪತಿ ಆಶುತೋಷ ಮುಖರ್ಜಿ ನೋಡಿದರು. ಇಂಥ ಪ್ರತಿಭಾಶಾಲಿಯಾದ ವಿಜ್ಞಾನಿಯನ್ನು ತಮ್ಮ ವಿಶ್ವವಿದ್ಯಾನಿಲಯಕ್ಕೆ ಹೇಗಾದರೂ ತಂದುಕೊಳ್ಳಬೇಕೆಂಬ ಬಯಕೆ ಆಯಿತು. ಒಳ್ಳೆ ಹೂಗಾರನಿದ್ದಂತೆ ಮುಖರ್ಜಿ-ಚಲೋ ಹೂ ಕಂಡರಾಯಿತು, ತನ್ನ ಮಾಲೆಗೆ ಅದನ್ನು ಸೇರಿಸುವುದೇ. ಪ್ರತಿಭಾಶಾಲಿಗಳು ಎಲ್ಲೇ ಇರಲಿ, ಯಾರೇ ಇರಲಿ, ತಮ್ಮ ವಿದ್ಯಾಲಯಕ್ಕೆ ಅವರನ್ನು ತಂದುಕೊಳ್ಳುವುದು ಅವರ ಗುಣ. ರಾಮನ್ ೧೯೧೭ರಲ್ಲಿ ಅಲ್ಲಿ ಭೌತಶಾಸ್ತ್ರದ ಅಧ್ಯಾಪಕರಾದರು.

ಅರ್ಥಶಾಖೆಯಲ್ಲಿ ಮೇಲಧಿಕಾರ ಬೇಕೋ, ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕ ಪದವಿ ಬೇಕೋ ಎಂದರೆ ಹೆಚ್ಚು ಸಂಬಳ ಸಿಗುವ ಅಧಿಕಾರ ಬೇಡ, ಇದೇ ಇರಲಿ ಎನ್ನುತ್ತಾರೆಯೆ ಯಾರಾದರೂ? ಬಂಗಾರದ ಕಾಲುದೀಪ ಬೇಡ, ತಿಳಿವಿನ ಹಣತೆಯೇ ಸಾಕು ಎಂದರು ವೆಂಕಟರಾಮನ್. ವಿಜ್ಞಾನಕ್ಕಾಗಿ ಅವರು ಮಾಡಿದ ತ್ಯಾಗ ಬಲು ದೊಡ್ಡದು. ಅವರು ಜಗತ್ತಿಗೆ ನೀಡಿದ ವಿಜ್ಞಾನದಾನಕ್ಕಿಂತ ಅವರೀ ತ್ಯಾಗ ಹಿರಿದು; ಅವರ ಜೀವನದ ರಸನಿಮಿಷ ಅದು.

ರಾಮನ್ ಅಧ್ಯಾಪಕರಾದರೊ ಇಲ್ಲವೊ, ಕಲ್ಕತ್ತೆ ವಿಜ್ಞಾನಕ್ಕೆ ತವರು ಮನೆಯಾಯಿತು. ಹೂವಿದ್ದ ಕಡೆ ದುಂಬಿಗಳಿಗೆ ಕಡಿಮೆಯೆ? ವಿಜ್ಞಾನ ವಿದ್ಯಾರ್ಥಿಗಳೆಷ್ಟೋ ಜನ ಗುರುವಿನ ಬಳಿಗೆ ಓಡಿಬಂದರು. ಅವರಲ್ಲೆಷ್ಟೋ ಜನ ಈಗ ಹೆಸರಾದ ವಿಜ್ಞಾನಿಗಳು; ಎಷ್ಟೋ ಜನ ದೊಡ್ಡ ಅಧಿಕಾರಿಗಳು. ಆ ಕಾಲದಲ್ಲೆ ವೆಂಕಟರಾಮನ್‌ರ ಪ್ರಯೋಗಸಿದ್ಧಿ ಜಗತ್ತನ್ನೆ ಬೆರಗಾಗಿಸಿದುದು. 'ಭಾರತೀಯ ಭೌತಶಾಸ್ತ್ರ' ವೆಂಬ ಪತ್ರಿಕೆ ಆ ಸಿದ್ಧಸತ್ಯಗಳ ದುಂದುಭಿ; ಅವರೆ ಅದರ ಸಂಪಾದಕರು.

ಈ ಸತ್ಯಶೋಧನೆಗೆ ಮನ್ನಣೆಯೂ ಕಾಲಕಾಲಕ್ಕೆ ದೊರೆಯುತ್ತ ಬಂತು. ಅಧ್ಯಾಪಕರಾದ ಆರೇಳು ವರ್ಷಕ್ಕೆ ವಿಲಾಯತಿಯ ಭೌತಶಾಸ್ತ್ರ ಸಂಘ

ರಾಮನ್‌ಗೆ ಸದಸ್ಯತ್ವದ ಮರ್ಯಾದೆ ಮಾಡಿತು. ೧೯೨೯ರಲ್ಲಿ ಬ್ರಿಟಿಷು ಸರಕಾರ ಸರ್ ಬಿರುದು ಕೊಟ್ಟಿತು. ಇಟಲಿಯ ಸಂಘದ ಬಿರುದು ಬಿಲ್ಲೆ, ವಿಲಾಯತಿಯ ಮೂರು ನಾಲ್ಕು ವಿಶ್ವವಿದ್ಯಾಲಯಗಳ ಗೌರವ ಪದವಿ, ಹೆಸರುವಾಸಿಯಾದ ಎಲ್ಲ ವಿಜ್ಞಾನ ಸಂಸ್ಥೆಗಳ—ಜರ್ಮನಿ, ಹಂಗೆರಿ, ಐರ್ಲೆಂಡ್, ಇಂಗ್ಲೆಂಡ್, ಸ್ಕಾಟ್‌ಲಂಡ್–ಸದಸ್ಯತ್ವ ದೊರೆತವು. ಜಗತ್ತಿನ ವಿಶ್ವವಿದ್ಯಾನಿಲಯಗಳ ಸಮ್ಮೇಳನ ೧೯೨೧ರಲ್ಲಿ ಆಕ್ಸ್‌ಫರ್ಡಿನಲ್ಲಿ ನಡೆದಾಗ ರಾಮನ್ ಅದಕ್ಕೆ ಪ್ರತಿನಿಧಿ. ೧೯೨೪ರಲ್ಲಿ ಗಣಿತಪಂಡಿತರ ಅಂತರ್‌ರಾಷ್ಟ್ರೀಯ ಸಭೆ ಟೊರೆಂಟೊದಲ್ಲಿ ನಡೆದಾಗ 'ಬೆಳಕು ಹೇಗೆ ಚೆಲ್ಲುತ್ತದೆ'—ಎಂಬ ವಿಷಯ ಚರ್ಚಿಸಲು ಇವರಿಗೆ ಕರೆ ಬಂತು. ಆಗ ಅಮೆರಿಕಾದಲ್ಲಿ ನಾಲ್ಕು ತಿಂಗಳು ಕ್ಯಾಲಿಫೋರ್ನಿಯದ ಯಂತ್ರವಿದ್ಯಾಲಯದಲ್ಲಿ ಅಧ್ಯಾಪಕತ್ವ ಮಾಡಬೇಕಾಯಿತು. ಮರುವರ್ಷ ರಷ್ಯಾದ ವಿಜ್ಞಾನ ಪರಿಷತ್ತಿನ 'ಇನ್ನೂರು ವರ್ಷದ ಹಬ್ಬ'ಕ್ಕೆ ಅತಿಥಿಯಾಗಿ ಮಾಸ್ಕೋಗೆ ಹೋಗಿದ್ದರು. ೧೯೨೯ರಲ್ಲಿ ಅಣುವಿನ ಸ್ವರೂಪವನ್ನು ಚರ್ಚಿಸಲು ಬ್ರಿಸ್ಟಲ್‌ಗೆ ಕರೆದರು ಜಗತ್ತಿನ ವಿಜ್ಞಾನಿಗಳು. ಆ ಸಂದರ್ಭದಲ್ಲಿ ವಿಲಾಯತಿಯ ಮುಖ್ಯ ಸ್ಥಳಗಳಿಗೆ ಹೋಗಿ ತಮ್ಮ ಪ್ರಯೋಗದ ವಿಷಯವನ್ನು ತಿಳಿಸಿದರು. ಮರುವರ್ಷ ವೆಂಕಟರಾಮನ್‌ಗೆ ನೋಬೆಲ್ ಬಹುಮಾನ ದೊರೆಯಿತು. ಜಗತ್ತಿನ ಹಿರಿಯ ವಿಜ್ಞಾನಿಗಳ ಸಾಲಿನಲ್ಲಿ ಅವರ ಹೆಸರು ಸೇರಿತು. "ರಾಮನ್ ಪರಿಣಾಮ"– (Raman Effect) ಎಂಬ ಹೆಸರೇ ಬಂತು ಅವರ ಸಿದ್ಧಾಂತಕ್ಕೆ.

ರಾಮನ್ ಸಿದ್ಧಾಂತ ಬಹು ಮುಖ್ಯವಾದುದು. ಆ ಸಿದ್ಧಾಂತ ಗಣಿತಶಾಸ್ತ್ರವನ್ನೂ, ವಿಜ್ಞಾನಶಾಸ್ತ್ರವನ್ನೂ ಒಂದು ಮೆಟ್ಟಲು ಮೇಲೇರಿಸಿತು; ಅವಕ್ಕೆ ಒಂದು ಹೊಸ ಬಯಲನ್ನು ತೋರಿಸಿ ಕೊಟ್ಟಿತು, ಈ ಸಿದ್ಧಾಂತ. ನ್ಯೂಟನ್‌ನ ಗುರುತ್ವಾಕರ್ಷಣ–ಪದಾರ್ಥಬಲದ ಸಿದ್ಧಾಂತವನ್ನು ತಿದ್ದಲು ಪರಿಮಾಣ ಯಂತ್ರಶಾಸ್ತ್ರ (Quantum mechanics) ಬಂದಿತ್ತು. ಅದಕ್ಕೆ ಪುಷ್ಟಿ ಕೊಟ್ಟಿತು ಇದು ವಿಜ್ಞಾನದಲ್ಲಿ. ರೇಡಿಯೋ 'ಕ್ಷ' ಕಿರಣಗಳ ಶಾಸ್ತ್ರಗಳಿಗೆ ಇನ್ನಿಲ್ಲದಷ್ಟು ಬಲ ದೊರೆಯಿತು. ಎಲ್ಲೆಲ್ಲೂ ಈ ಸಿದ್ಧಾಂತ ಚರ್ಚೆಗೆ ಬಂತು. ಇದನ್ನು ಅವಲಂಬಿಸಿ ಬೇರೆ ಬೇರೆ ಪ್ರಯೋಗ ನಾನಾಕಡೆ ನಡೆದವು. "ರಾಮನ್ ಪರಿಣಾಮ" ಸಿದ್ಧಾಂತವನ್ನು ಚರ್ಚಿಸಿ ವಿಜ್ಞಾನಿಗಳು ಲೇಖನ

ಬರೆದರು. ಸುಮಾರು ಎರಡು ಸಾವಿರ ಲೇಖನ ಬಂದಿವೆ; ಇನ್ನೂ ಬರುತ್ತಲೇ ಇವೆ. ಭೂತಗನ್ನಡಿ, ದೂರಗನ್ನಡಿಗಳನ್ನು ಮಾಡುವ ಉದ್ಯೋಗಕ್ಕಂತೂ ಹೊಸಜೀವ ಬಂತು ಇದರಿಂದ.

ಬೆಳಕಿನ ಕಣ್ಣುಮುಚ್ಚಾಲೆಯ ಮಾತು ಹೇಳಿತ್ತಷ್ಟೆ. ಅದೇ ರಾಮನ್ ಸಿದ್ಧಾಂತ. ಬೆಳಕು ನೀರಿನಲ್ಲಿ ಮುಳುಗಿ ಕರಗಿದಾಗ ಬಣ್ಣ ಹುಟ್ಟಿ, ಕಡಲು ನೀಲಿಯಾಯಿತು. ಇದೇ ದಾರಿ ನಡೆದು, ಪ್ರಯೋಗದ ಮೇಲೆ ಪ್ರಯೋಗ ನಡೆಸಿ, ಬೆಳಕಿನ ಬಸಿರಲ್ಲಿರುವ ಬಣ್ಣಬಣ್ಣದ ಸಂತೆಯನ್ನು ಕಂಡರು. ಅದರ ಮಾರೀಚ ವಿದ್ಯೆಯನ್ನು ಅರಿತರು. ಇಲ್ಲಿದ್ದ ಬಣ್ಣ ಅಲ್ಲಿಲ್ಲ; ಬೆಳಕು ಇಲ್ಲಿ ಹರಿದರೆ ಒಂದು ಬಣ್ಣ ಹೋಗುತ್ತದೆ, ಒಂದು ಬಣ್ಣ ಬರುತ್ತದೆ. ನೀರಲ್ಲಿ ಕರಗಿದಾಗ, ಗಾಜಿನಲ್ಲಿ ತೂರಿದಾಗ, ಇದು ಸ್ಪಷ್ಟವಾಗಿ ಖಚಿತವಾಗಿ ತಿಳಿಯಿತು. ದೀಪದ ಕಿರಣದಲ್ಲಿ ಇಲ್ಲದ ಬಣ್ಣ, ಬಣ್ಣದ ಗೆರೆ, ಆ ಬೆಳಕನ್ನು ಹೀರಿದ ಗಾಜಿನ ಇನ್ನೊಂದು ಮಗ್ಗುಲಲ್ಲಿ ಕಾಣುವ ಬಣ್ಣದ ಸಾಲಿನಲ್ಲಿ ಕಂಡು ಬಂತು. ಗಾಜಿಗೆ ತಗಲುವ ಮೊದಲು ಆ ಕಿರಣದಲ್ಲಿ ಅವು ಇರಲಿಲ್ಲ; ಗಾಜೂ ಬೆಳಕೂ ಸೇರಿ ಈ ಗೆರೆ ಬಂದವು. ಇವನ್ನು 'ರಾಮನ್ ಗೆರೆ' ಅನ್ನುತ್ತಾರೆ. ಈ ಬಣ್ಣದ ಸಾಲಿಗೆ "ರಾಮನ್ ಬಣ್ಣದ ಸಾಲು" ಎನ್ನುತ್ತಾರೆ.

ಇದೊಂದೆ ಅಲ್ಲ ರಾಮನ್ ಮಾಡಿದ ಪ್ರಯೋಗ. ಅವರ ರುಚಿ ಬಹು ವಿಸ್ತಾರ. ಬುದ್ಧಿ ಬಲು ಹರಿತ. ಧ್ವನಿಶಾಸ್ತ್ರದಲ್ಲೂ ಅವರಿಗೆ ಅಭಿರುಚಿ. ಸಂಗೀತವಾದ್ಯಗಳ ವಿಷಯ, ನಾದತರಂಗಗಳ ವಿಷಯ ಬೇಕಾದಷ್ಟು ಬರೆದಿದ್ದಾರೆ. ನಾನಾಸಮಸ್ಯೆ, ಅನೇಕ ಪ್ರಯೋಗ. ಅವರು ಅಧ್ಯಾಪಕರಾಗಿರುವಾಗ ನಡೆಸಿದ ಪ್ರಯೋಗಗಳ ಫಲವಾಗಿ ೬೦೦ ಸ್ವತಂತ್ರ ಲೇಖನ ಹೊರಬಿದ್ದಿವೆ. ಎಲ್ಲದರಲ್ಲೂ ಒಂದು ವೈಶಿಷ್ಟ್ಯ, ಸ್ವಾತಂತ್ರ್ಯ ಕಾಣುತ್ತದೆ. ಯಾವ ಗುರುವಿನ ಬಳಿಯಲ್ಲೂ ಪ್ರಯೋಗ ಪದ್ಧತಿ ಕಲಿಯುವ ಭಾಗ್ಯ ಅವರಿಗೆ ಸಿಗಲಿಲ್ಲ. ಪ್ರಕೃತಿಯೇ ಅವರ ಗುರು. ವಿಲಾಯತಿಯ ಪ್ರಯೋಗಶಾಲೆಗಳ ಶಿಕ್ಷಣವೂ ಇಲ್ಲ. ಯಾರ ಪ್ರೋತ್ಸಾಹವನ್ನೂ ಕಾಣರು. ಚಿಕ್ಕಂದಿನಿಂದಲೂ ಪ್ರಕೃತಿಯ ತೊಡೆಯಲ್ಲಿ ಆಡಿದ ಮಗು. ಅವರ ಸ್ಫೂರ್ತಿ ಸ್ವಯಂಭೂ; ಅವರ ದಾರಿ ತೀರ ಸ್ವತಂತ್ರ. ಎಲ್ಲದಕಿಂತ ಹೆಚ್ಚಿನದು ಅವರ ನಿಷ್ಠೆ.

ಮಾತಿನಲ್ಲಿ ರಾಮನ್ ಬಹು ಸರಸಿ. ಯಾವ ವಿಷಯದ ಮೇಲೆ ಬೇಕಾದರೂ ಗಂಟೆಗಟ್ಟಲೆ ಸರಸವಾಗಿ ವಿನೋದವಾಗಿ ಮಾತಾಡಬಲ್ಲರು. ಮಕ್ಕಳಿಗೂ ತಿಳಿಯುವಂತೆ ಮಾತಾಡಬಲ್ಲರು. ವಿಜ್ಞಾನಿಯೆಂದರೆ ಬಾಳಿನಿಂದ ದೂರ ಸರಿದು ನಿಂತ ಬರೀ ತತ್ವಮಥನದ ವಕ್ರತುಂಡನಲ್ಲ; ಪ್ರಯೋಗಶಾಲೆಯೆ ಅವನ ಜಗತ್ತಲ್ಲ. ರಾಮನ್‌ರ ನಗೆಗಾರಿಕೆ, ಸರಲತೆ, ಸೌಜನ್ಯ ಅದನ್ನು ಸಾರಿ ಹೇಳುತ್ತಿದೆ.

ರಾಮನ್ ಹುಟ್ಟಿದ್ದು ತಮಿಳು ನಾಡಿನಲ್ಲಿ, ಬೆಳೆದದ್ದು ಆಂಧ್ರದಲ್ಲಿ, ಮಾಗಿದ್ದು ಬಂಗಾಳದಲ್ಲಿ; ಈಗ ಇರುವುದು ಕರ್ನಾಟಕದಲ್ಲಿ. ಈ ಪರಿವ್ರಾಜಕ ತನದ ಬಾಳು ಪ್ರಾಂತಾಭಿಮಾನದ ಹುಚ್ಚಿನ ಪರೆ ಬಿಡಿಸಿದೆ. ಕನ್ನಡ ನಾಡಿನಲ್ಲಿ ಇದ್ದರ ನಾನು ಕನ್ನಡಿಗ; ಕನ್ನಡದಲ್ಲಿ ಆಂಧ್ರ, ಆಂಧ್ರರಲ್ಲಿ ತಮಿಳ ಆಗಿರು ವುದು ದೇಶದ್ರೋಹ, ಮಿತ್ರದ್ರೋಹ ಎಂದು ಅವರ ಅಭಿಪ್ರಾಯ. ಅವರ ಹೆಂಡತಿ ಲೋಕಸುಂದರಿಯಮ್ಮ ಕನ್ನಡದಲ್ಲೆ ಸಭೆಗಳಲ್ಲಿ ಮಾತಾಡಿ, ಇದನ್ನು ಮಾಡಿತೋರಿಸಿದಾರೆ.

ಬೆಂಗಳೂರಿನಲ್ಲಿ ಅಖಿಲ ಭಾರತದ ವಿಜ್ಞಾನ ಕೇಂದ್ರವಿದೆ; ತಾತಾ ವಿಜ್ಞಾನಶಾಲೆ. ಅಲ್ಲಿ ನಿಂತು ವೆಂಕಟರಾಮನ್ ಭಾರತವನ್ನು ಬೆಳಗಿಸುತ್ತಿ ದಾರೆ. ವಿಜ್ಞಾನಪ್ರಯೋಗದ ಆಸೆ ಅವರಿಗೆ ದಿನೇ ದಿನೇ ಇಮ್ಮಡಿಸುತ್ತಿದೆ. ಅವರ ನೆರಳಿನಲ್ಲಿ ಹಿಂದುಸ್ಥಾನದ ವಿಜ್ಞಾನಿಗಳು ತಮ್ಮ ಭವಿಷ್ಯವನ್ನು ಕಟ್ಟುತ್ತಿದಾರೆ.

***
***

# ಭಿಕ್ಷು ಉತ್ತಮ

ನಂದರಾಸು ಕಾಂಗ್ರೆಸ್ಸಿಗೆ ಹೋದ ಜನ, ಮುಂದಾಳುಗಳ ಗುಂಪಿನಲ್ಲಿ ಒಬ್ಬ ವಿಚಿತ್ರ ಸನ್ಯಾಸಿಯನ್ನು ನೋಡಿದರು. ಮೈಮೇಲೆ ಕೇಸರಿ ಬಣ್ಣದ ವಸ್ತ್ರ; ಕೈಯಲ್ಲಿ ಬರ್ಮಾ ಛತ್ರಿ; ಹಸುವಿನ ಕಾಲುಗೊರಸಿನಂಥ ಆ ಮೆಟ್ಟು. ನುಣ್ಣಗೆ ಮಿಂಚುತ್ತಿದ್ದ ತಲೆ. ಮೋರೆಯಲ್ಲಿ ವಿಲಕ್ಷಣ ತೇಜಸ್ಸು.

ಆ ವ್ಯಕ್ತಿಯೇ ಬೌದ್ಧ ಭಿಕ್ಷು **ಉತ್ತಮ.** ಭಿಕ್ಷು ಉತ್ತಮ ನಿಜವಾಗಿ ಉತ್ತಮ ಭಿಕ್ಷು. ಹಿಂದು ಸಂಸ್ಕೃತಿಯ ಉತ್ತಮ ಫಲ.

ಯಾರೋ ಒಮ್ಮೆ ಭಿಕ್ಷುವನ್ನು ಕೇಳಿದರಂತೆ: 'ನೀವು ಯಾವ ಯಾವ ದೇಶಕ್ಕೆ ಹೋಗಿದ್ದಿರಿ, ಭಿಕ್ಷು ?' ಎಂತ. ಉತ್ತಮ ಹೇಳಿದರು:—'ಎರಡೇ ಎರಡು ಪ್ರದೇಶಕ್ಕೆ ಹೋಗಿಲ್ಲ, ಉಳಿದುವೆಲ್ಲ ನೋಡಿದೇನೆ.' 'ಅವೆರಡು ಯಾವುವು ?' 'ಒಂದು ಸ್ವರ್ಗ, ಇನ್ನೊಂದು ನರಕ.' ಎಲ್ಲರೂ ಬಿದ್ದುಬಿದ್ದು ನಕ್ಕರು.

ಹೌದು. ಭಿಕ್ಷು ಉತ್ತಮ ಜಗತ್ಸಂಚಾರಿ. ಅವರು ಕಾಲಿಡದ ದೇಶವೇ ಇಲ್ಲ. ಮೂರು ಲೋಕಗಳು ನಮ್ಮ ತಿಳಿವಿಗೆ ಸಿಕ್ಕಿದ್ದರೆ, ನಾರದನನ್ನೂ ಮೀರಿಸಿಬಿಡುತ್ತಿದ್ದರೋ ಏನೋ. ಜಗತ್ತನ್ನು ತುಂಬಾ ನೋಡಿದರು. ೨-೩ ಸಲ ಅದನ್ನು ಸುತ್ತಿದರು. ಸುಮ್ಮನೆ ವಿಲಾಸವಿನೋದಕ್ಕಾಗಿ ಅವರು ಲೋಕಯಾತ್ರೆ ಮಾಡಿಲ್ಲ. ಚೆನ್ನಾಗಿ ಕಣ್ಣುಬಿಟ್ಟು ನೋಡಿದರು. ಅವರ ಪ್ರಪಂಚಯಾತ್ರೆಯೇ ಅವರಿಗೆ ದೊಡ್ಡ ವಿದ್ಯಾಭ್ಯಾಸವಾಯಿತು.

ಉತ್ತಮ ಬರ್ಮಾ ಜನ. ಹುಟ್ಟಿದುದು ಅಕ್ಯಾಬಿನಲ್ಲಿ. ಐದನೆಯ ವರ್ಷಕ್ಕೇ ಅವರ ತಂದೆ ತೀರಿಕೊಂಡರು. ತಾಯಿಯೇ ಎಲ್ಲ ಹೊಣೆಯನ್ನೂ ಹೊತ್ತರು. ಮಗುವನ್ನು ಪ್ರಾಥಮಿಕ ಶಾಲೆಗೆ ಹಾಕಿದ್ದಾಯಿತು. ಉತ್ತಮ ಬುದ್ಧಿಯಲ್ಲಿ ಚುರುಕು. ಆಗ ಬರ್ಮಾದೇಶದಲ್ಲಿದ್ದ ನಾರ್ಮಲ್ ಸ್ಕೂಲನ್ನು ಮುಗಿಸಿ ಟ್ರೇಂಡ್ ಆಗಿ ಹೊರಬಿದ್ದ. ವಿದ್ಯಾಭ್ಯಾಸ ಮುಗಿದ ಮೇಲೆ ನಮ್ಮಲ್ಲಿ ಮಾಡುವುದೇನು—ಗೊತ್ತೇ ಇದೆ. ನೌಕರಿ ಹಿಡಿಯುವುದು. ಉತ್ತಮನೂ

ಬರ್ಮಾ ಹೆಣ್ಣುಮಕ್ಕಳ ಶಾಲೆಯೊಂದರಲ್ಲಿ ಶಿಕ್ಷಕನಾದ. ಆದರೆ ಆ ಸಪ್ಪೆ ಬಾಳಿನ ಗುಲಾಮಗಿರಿ ಈ ಧೀರ ಜೀವಕ್ಕೆ ಹೇಗೆ ಒಗ್ಗಬೇಕು. ಆಗ ಉತ್ತಮನಿಗೆ ಇನ್ನೂ ಹರಯ. ರಕ್ತದಲ್ಲಿ ಜಗತ್ತನ್ನೇ ಗೆಲ್ಲುವ ಬಿಸಿ. ಮನಸಿನಲ್ಲಿ ವಿಶ್ವರಹಸ್ಯವನ್ನು ತಿಳಿಯಬೇಕೆಂಬ ಕುತೂಹಲ. ಉರ್ದೂ ಕವಿಯೊಬ್ಬ ಹೇಳಿದ್ದಾನೆ: 'ಹರೆಯ ಬಂದಿದೆ. ಜಗತ್ತೆಲ್ಲ ಸೂರ್ಯನ ಬಂಗಾರದ ಕಿರಣಗಳಿಂದ ಬೆಳಗುತ್ತಿದೆ. ಈಗಲೇ ಹೊರಡು. ಯಾತ್ರೆ ಮಾಡಿಕೋಡು. ಸಂಜೆಯಾದ ಮೇಲೆ ಬರೀ ಕತ್ತಲು!' ಉತ್ತಮನಿಗೂ ಆ ತರದ ಹಂಬಲ.

ಕೆಲಸಕ್ಕೆ ಶರಣುಹೊಡೆದು, ಹೇಳದೆ ಕೇಳದೆ ಉತ್ತಮ ಬರ್ಮಾದಿಂದ ಜಾರಿ ಬಂಗಾಲಕ್ಕ ಬಂದ. ಕಲಕತ್ತೆಗೆ ತಲುಪಿದ. ಕೈಯಲ್ಲಿ ಕಾಸಿಲ್ಲ, ಊರಲ್ಲಿ ಗುರುತಿಲ್ಲ. ಬೇರೆ ಒಂದು ಪ್ರಪಂಚಕ್ಕೇ ಬಂದಹಾಗಿತ್ತು. ಜನ ಹೊಸಬರು. ನುಡಿ ಹೊಸದು. ರೀತಿ ರಿವಾಜು ಹೊಸ. ಎಲ್ಲಾ ಹೊಸದು. ಊರೆಲ್ಲ ಅಲೆದಲೆದು ಕಟ್ಟಕಡೆಗೆ ಯಾವುದೋ ಒಂದು ಚಿನಿವಾಲರ ಅಂಗಡಿಯಲ್ಲಿ ಲೆಕ್ಕಬರೆಯುವ ಕೆಲಸ ಸಂಪಾದಿಸಿಕೊಂಡ. ಹೊಟ್ಟೆಯ ಪಾಡಿಗಾಗಿ ಉತ್ತಮ ಅಲ್ಲಿಗೆ ಬಂದಿದ್ದನೇ? ಅವನ ಜೀವ ಹೊಸ ಅನುಭವಕ್ಕಾಗಿ ಹಂಬಲಿಸುತ್ತಿತ್ತು. ಕಲಕತ್ತೆಯ ಡಫ್ ಕಾಲೇಜಿಗೆ ಸೇರಿದ. ಅದರಲ್ಲಿ ಓದುಕಲಿಸುತ್ತಿದ್ದುದು ಬಂಗಾಲಿ ಭಾಷೆಯಲ್ಲಿ. ಇವನಿಗೆ ಗೊತ್ತಿದ್ದುದು ಬರ್ಮಾಭಾಷೆ. ಈ ಮಹಾ ಸಾಹಸಿಗೆ ಅದೊಂದು ಲಕ್ಷ್ಯವೇ? ಬಂಗಾಲಿ ಕಲಿತ. ಅದರಲ್ಲೇ ಪರೀಕ್ಷೆಗೂ ಕುಳಿತ. ತೇರ್ಗಡೆಯೂ ಆದ.

ಉತ್ತಮನ ಓದು ಮುಂದೆ ಸಾಗಲಿಲ್ಲ. ಪದವೀಧರನಾಗಿ ಬೆಳೆಯಲೇ ಇಲ್ಲ. ಉತ್ತಮನ ಪಾಂಡಿತ್ಯ ಅವರ ಲೋಕಾನುಭವದ್ದು. ಅವರ ಪರಿವ್ರಾಜಕತನದಲ್ಲಿ ಹತ್ತೂ ಕಡೆ ಸಾವಿರಾರು ಜನರನ್ನು ನೋಡಿದರು. ಅವರೊಡನೆ ವ್ಯವಹಾರ ಮಾಡಿದರು. ಆ ಅನುಭವ ಅವರಿಗೆ ಬೆಳಕಾಯಿತು. ಅಂತೆಯೆ ಅವರ ಮಾತಿನಲ್ಲಿ ಅಮೇರಿಕಾ, ಯುರೋಪು, ಚೀನ, ಜಪಾನುಗಳು ಸಹ ಬರುತ್ತಿದ್ದುವು. ಅಲ್ಲಿಯ ಸಂಪ್ರದಾಯಗಳ ಮಾತು, ಅಲ್ಲಿಯ ಉದ್ಯೋಗಶೀಲತೆಯ ವಿಷಯ ಅವರಿಗೆ ತುಂಬಾ ಪ್ರೀತಿ. ಅವರ ಜೊತೆಗೆ ಕುಳಿತು ಗಂಟೆಗಟ್ಟಲೆ ಮಾತಾಡಿದರೂ ಬೇಸರ ಬರುತ್ತಿದ್ದಿಲ್ಲ. ಮಾತಿನಲ್ಲಿ ಅಷ್ಟು ಸರಸಿ.

ಅವರ ಮಾತಿನ ಸರಸಕ್ಕಿಂತ ಸ್ವಭಾವದ ಉತ್ಸಾಹ ದೊಡ್ಡದು. ಯಾವಾಗಲೂ ನಿಶ್ಚಿಂತರಾಗಿ ಪ್ರಸನ್ನ ಹೃದಯರಾಗಿ ಇರುತ್ತಿದ್ದರು. ಹಾಗಿರಲು ಬೇಕಾದ ನಿಸ್ಪೃಹತೆ ಅವರಿಗೆ ತುಂಬಾ ಇತ್ತು. ನಿಷ್ಕಾಮಕ್ಕೂ ಪ್ರಸನ್ನತೆಗೂ ತುಂಬಾ ಹತ್ತಿರದ ನಂಟು. ಆದರೆ ಉತ್ತಮನ ಸ್ವಭಾವದ ಪ್ರಸನ್ನತೆ ಬರಿಯ ಗಾಂಭೀರ್ಯವಲ್ಲ. ಆ ಜೀವ ಯಾವಾಗಲೂ ತುಂಬಿ ತುಳುಕುತ್ತಿತ್ತು. ನಾಲ್ಕು ದೇಶ ನೋಡಿ, ನಾಲ್ಕು ತರದ ಅನುಭವ ಗಳಿಸಿದವರಿಗೆ ಸ್ವಭಾವದಲ್ಲಿ ಸರಸತೆ ಇದ್ದರೂ ಉಲ್ಲಾಸ ಕಡಮೆಯಾಗಿರುತ್ತದೆ. ಅಲ್ಲೊಂದು ಇಲ್ಲೊಂದು ಪೆಟ್ಟು ತಿಂದವರಿಗಂತೂ ಸ್ವಭಾವದಲ್ಲಿ ಹುಳಿ ಸೇರಿ ಬಿಡುತ್ತದೆ. ಮೊಹರಂ ಹಬ್ಬದಲ್ಲಿ ಮುಸಲ್ಮಾನರು ಇರುವಂತೆ. ಉತ್ತಮನ ಹತ್ತಿರ ಅಂಥ ಗೋಳು ಸುಳಿಯದು. ಹತ್ತಿರ ಬಂದವರ ಮೊಹರವಿಾ ಸ್ವಭಾವವೂ ಬದಲಾಗುತ್ತದೆ.

ಒಮ್ಮೆ ಉತ್ತಮ ಇರುತ್ತಿದ್ದ ಜಾಪಾನೀ ಮಂದಿರದಲ್ಲಿ ಕಳವಾಯಿತು. ಎಲ್ಲವನ್ನೂ ಹೊತ್ತಿದ್ದರು ಕಳ್ಳರು. ಏನೋ ಒಂದು ಕೆಲಸಕ್ಕಾಗಿ ೨೫೦ ರೂಪಾಯಿ ಕೂಡಿಸಿಟ್ಟಿದ್ದರು. ಒಂದು ಟೈಪುರಯಿಟರು ಯಂತ್ರ, ಕಾಗದ-ಪತ್ರಗಳ ಪೆಟ್ಟಿಗೆ. ಅವನ್ನೂ ಬಟ್ಟೆ-ಬರೆ, ಪಾತ್ರೆ-ಪದಾರ್ಥ ಎಲ್ಲವನ್ನೂ ಕದ್ದರು. ಉಳಿದಿದ್ದುದೆಂದರೆ ಮೈಮೇಲಿನ ಅರಿವೆ ಮಾತ್ರ. ಮಾರನೆಯ ದಿನ ಬರ್ಮಾ ಪತ್ರಿಕೆಗಳಲ್ಲಿ ಒಂದು ಪ್ರಕಟನೆ ಬಂದಿತು; 'ಯಾರು ನನ್ನ ಸಾಮಾನು ಕದ್ದರೋ ಅವರು ಒಳ್ಳೆಯ ಕೆಲಸವನ್ನೇ ಮಾಡಿದರು. ಅದೇನು ತಪ್ಪಲ್ಲ; ಸಾಮಾನು ಆತನಿಗೆ ಉಪಯೋಗಕ್ಕೆ ಬರುತ್ತವೆ. ಅವು ಆತನಿಗೇ ಇರಲಿ. ಆದರೆ ನನ್ನ ಪೆಟ್ಟಿಗೆಯಲ್ಲಿ ಕಾಗದ-ಪತ್ರ ಕೆಲವು ಇವೆ. ಅವು ನನಗೆ ಅತ್ಯಗತ್ಯ. ಆತನಿಗಂತೂ ಅವುಗಳಿಂದ ಏನೂ ಉಪಯೋಗವಿಲ್ಲ. ಅವನ್ನು ಹಿಂದಿರುಗಿ ತಲುಪಿಸಿದರೆ ನಾನು ಕೃತಜ್ಞನಾಗಿರುತ್ತೇನೆ. ಪೋಲೀಸರಿಗೆ ತಿಳಿಸುವುದೂ ಇಲ್ಲ, ಹೇಳುವುದೂ ಇಲ್ಲ!' ಕೆಳಗೆ ಸಹಿ—'ಭಿಕ್ಷು ಉತ್ತಮ.

ಯಾರೋ ಕೇಳಿದರು: 'ಭಿಕ್ಷು, ಹೀಗೇಕೆ ಮಾಡಿದಿರಿ?' ಭಿಕ್ಷು ಒಡನೆಯೆ ಹೇಳಿದರು: 'ಆದದ್ದೆಲ್ಲ ಒಳಿತೇ ಆಯಿತು. ಭಿಕ್ಷುವಿಗೇಕೆ ಬೇಕು ಆ ಅಟ್ಟಹಾಸ? ಹಣ ಕಾಸು ಸಾಮಾನು ನನಗೇಕೆ? ದೇವರಿಗೆ ಹಾಗೆ ಅನಿಸಿರಬೇಕು. ಸರಿ, ಕಳ್ಳತನ ಮಾಡಿಸಿದ. ಚೆನ್ನಾಯಿತು, ಬಹಳ ಚೆಲೋ!' ಉತ್ತಮ ಮತ್ತೆ ಭಿಕ್ಷು ಆದ.

ಕಲಕತ್ತೆಯಲ್ಲಿ ಓದುಬಿಟ್ಟು ಬರ್ಮಾಕ್ಕೆ ಹಿಂದಿರುಗಿದ ಮೇಲೆಯೆ ಉತ್ತಮ ಭಿಕ್ಷು ಆದದ್ದು. ಅಲ್ಲಿ ಓದುವಾಗ ಇತಿಹಾಸವನ್ನು ಕೂಲಂಕಷವಾಗಿ ಓದಲೇಬೇಕಾಯಿತು. ಹಾಗೆ ಓದುವಾಗ ಬೌದ್ಧಕಾಲದ ಸ್ವರ್ಣಯುಗದ ದಿವ್ಯಕಥೆ ಉತ್ತಮನ ಮನಸ್ಸನ್ನು ಪೂರಾ ಸೆಳೆಯಿತು. ಹಿಂದುಸ್ತಾನದ ಗುಡಿ ಇತರ ಖಂಡಗಳಲ್ಲಿ ಹಾರುತ್ತಿದ್ದ ಕಾಲ ಅದು. ಹಿಂದುಸ್ತಾನದೊಳಗೂ ಅದು ಎಂಥ ಸಮಯ! ಭಾರತವೆಲ್ಲ ಒಂದೇ ಅರಸೊತ್ತಿಗೆ. ಸಾರ್ವಭೌಮ ಮೌರ್ಯರ ದಿನ. ಒಂದೇ ನಾಡು, ಒಂದೇ ರಾಜ್ಯ, ಒಂದೇ ಸಂಸ್ಕೃತಿ. ಆ ಬಲವಾದರೂ ಎಂಥದು! ನಮ್ಮ ಸಂಸ್ಕೃತಿ ಚೀನ-ಜಪಾನುಗಳಲ್ಲಿ ಹರಡಿತ್ತು. ನಮ್ಮ ಧರ್ಮ ಅವರಿಗೆ ಹಾದಿ ತೋರಿಸಿತ್ತು. ಈಗಲೂ ಈ ವಿಶಾಲಭಾರತದ ಕುರುಹು ಕಾಣುತ್ತಿವೆ. ಬುದ್ಧದೇವನ ಸಂದೇಶ, ಭಾರತಕ್ಕೆ ಒಂದು ಹೊಸ ಜೀವ ಕೊಟ್ಟಿತು. ಧರ್ಮ, ಸಂಸ್ಕೃತಿ, ಸಾಹಿತ್ಯ-ಕಲೆ, ರಾಜ್ಯ, ವಾಣಿಜ್ಯ ಎಲ್ಲದರಲ್ಲಿಯೂ ಒಂದು ಹೊಸ ಪೈರು ಬೆಳೆದು ಬಂದಿತು. ಆ ಕಾಲ ಮತ್ತೆ ಬರಲಾರದೇ? ಪಾತಾಳಕ್ಕೆ ಇಳಿದಿರುವ ಇಂದಿನ ಹಿಂದುಸ್ತಾನಕ್ಕೆ ಭಗವಾನ್ ಬುದ್ಧದೇವನ ಸಂದೇಶವನ್ನು ಮತ್ತೆ ಸಾರಿದರೆ ಆ ದಿನ ಮರಳಿ ಬಂದಾವೇನು? ಮತ್ತೆ ಭಾರತ ಬೆಳಗೀತೇ?.... ಹೀಗೊಂದು ಕನಸು ಉತ್ತಮನ ಮನಸಿನಲ್ಲಿ, ಹೃದಯದಲ್ಲಿ ರೂಪುಗೊಂಡಿತು.

ಉತ್ತಮ ಸಂಕಲ್ಪಶಾಲಿ ಮನುಷ್ಯ. ಮನಸಿಗೆ ತೋರಿದುದನ್ನು ಮಾಡುವ ಜ್ಞಾನಿ. ಅದನ್ನು ಸಾಧಿಸುವುದರಲ್ಲಿಯೂ ಉಡದ ಹಿಡಿತ. ಹಿಡಿದುದನ್ನು ಮಾಡಿಯೇ ತೀರಬೇಕು. ಹಿಂದುಸ್ತಾನದ ಪುನರುಜ್ಜೀವನದ ಸವಿಗನಸು. ಅದಕ್ಕೆ ಬೌದ್ಧಧರ್ಮಪ್ರಸಾರವೇ ಹಾದಿ ಎಂಬ ವಿಚಾರ. ಕೂಡಲೆ ಕಲಕತ್ತೆಗೆ ಕೈಮುಗಿದು, ಉತ್ತಮ ಬರ್ಮಾಕ್ಕೆ ಮರಳಿದರು. ಅಲ್ಲಿ ಭಿಕ್ಷು ದೀಕ್ಷೆ ಸ್ವೀಕರಿಸಿದರು. ತನ್ನ ಕನಸನ್ನು ಸಾಧಿಸಲು ಮನೆಮಾರು, ಮದುವೆ, ಮಕ್ಕಳು ಎಲ್ಲವನ್ನೂ ಬಿಟ್ಟರು. ನಾಲ್ಕು ವರ್ಷದ ದಿನ ಪಾಲಿ ಭಾಷೆಯ ಅಭ್ಯಾಸ, ಬೌದ್ಧದರ್ಶನದ ಅಧ್ಯಯನ ಮಾಡಿದರು. ಅದರಲ್ಲಿ ಸಾಕಷ್ಟು ಪಾಂಡಿತ್ಯ ಗಳಿಸಿದ ಮೇಲೆ ಮರಳಿ ಹಿಂದುಸ್ತಾನಕ್ಕೆ ಬಂದರು.

ಹಿಂದುಸ್ತಾನದಲ್ಲಿ ತಥಾಗತಸಂದೇಶದ ಪ್ರಚಾರ ನಡೆಯಿತು. ಆ ಭಾಷಣಗಳಲ್ಲಿ ಉತ್ತಮನ ದೇಶಾಭಿಮಾನ, ರಾಷ್ಟ್ರನಿರ್ಮಾಣದ ಹಂಬಲ ಮಿಂಚಿನಂತೆ ಹೊಳಪುಗೊಂಡು ತೋರುತ್ತಿದ್ದುವು. ಜನರಿಗೆ ಎಲ್ಲಿಂದಲೋ

ಹೊಸದೊಂದು ಆಪ್ತವಚನ ಕೇಳಿಸಿದ ಹಾಗೆ ಆಗಿತ್ತು. ಆದರೆ ಅದು ಬೌದ್ಧರ ಮಾತು. ಅದರಲ್ಲಿ ಹಿಂದೂ ಧರ್ಮದ ಬಣ್ಣವಿಲ್ಲ. ಪಂಡಿತರು ಭಿಕ್ಷುವಿಗೆ ಇದಿರು ಬಂದರು. 'ಸಂಸ್ಕೃತಭಾಷೆ ದೇವಭಾಷೆ, ಧರ್ಮಭಾಷೆ. ಅದೇ ಬಾರದೆ ಧರ್ಮೋಪದೇಶವೆಂಥದು?' ಎಂದರು. ಉತ್ತಮನಿಗೆ ಸಂಸ್ಕೃತ ಬಾರದು. ಅಂಥ ಸಣ್ಣ ಬಾಯಿಗೆ ಧರ್ಮ ದೊಡ್ಡ ತುತ್ತು. ಈ ಗುಲ್ಲಿಗೆ ಭಿಕ್ಷು ಹೆದರಲಿಲ್ಲ. ಯಾವುದಕ್ಕೂ ಅಂಜದ ಪ್ರಾಣಿ. ಸರಿ, ಒಡನೆಯೇ ಕಾಶಿಗೆ ತಿಕೀಟು ತೆಗೆದರು. ಕಾಶಿಗೆ ಬಂದು ಅಲ್ಲಿ Queen's College ಸೇರಿದರು. ಮೂರು ವರ್ಷ ಅಖಂಡವಾಗಿ ಸಂಸ್ಕೃತ, ಹಿಂದೀ ಕಲಿತರು.

ಅಲ್ಲಿಗೆ ಮುಗಿಯಲಿಲ್ಲ. ಸಜೀವ ಭಾರತದ ಸಮಗ್ರದರ್ಶನದಿಂದ ಹಿಂದೂ ಸಂಸ್ಕೃತಿಯ ಸಂಪೂರ್ಣ ಪರಿಚಯಮಾಡಿಕೊಳ್ಳುವ ಬಯಕೆ ಯಾಯಿತು. ಹಿಂದುಸ್ತಾನವನ್ನೆಲ್ಲ ಸುತ್ತಿದರು. ಕಾಶ್ಮೀರದಿಂದ ತಿರುವಾಂಕೂರಿನವರೆಗೆ—ಬಂಗಾಲದಿಂದ ಪಂಜಾಬಿನವರೆಗೆ, ಒಂದು ವರ್ಷ ಕಾಲ ಓಡಾಡಿದರು.

ಈ ಭಾರತಪ್ರವಾಸದಲ್ಲಿ ಹುಟ್ಟಿದ ದೇಶಾಟನೆಯ ರುಚಿ, ಭಿಕ್ಷುವನ್ನು ಅಲ್ಲಿಗೇ ಬಿಡದೆ ಪರದೇಶಯಾತ್ರೆಗೆ ಹಚ್ಚಿತು. ಅಲ್ಲಿ ಇಲ್ಲಿ ಅಲೆದು, ಕಡೆಗೆ ಇಂಗ್ಲೆಂಡಿಗೆ ಹೋಗಿ ಮುಟ್ಟಿದರು. ಅಲ್ಲಿ ಕೇಂಬ್ರಿಜ್ ಆಕ್ಸ್‌ಫರ್ಡಿಗೆ ಮಣ್ಣು ಹಾಕಿದರು. ಲಂಡನ್‌ಗೆ ಬಂದು ಬ್ಯಾರಿಸ್ಟರಿ ಕಲಿಯಬಯಸಿದರು. ಈ ಸುದ್ದಿ ಅವರ ತಾಯಿಗೆ ತಿಳಿದಾಗ ಆಕೆ ಬರೆದರು: 'ನೀನು ಸರ್ವಸಂಗ ಬಿಟ್ಟ ಸಂನ್ಯಾಸಿ. ಈ ವಕೀಲಿಯ ಕೆಲಸ ಸುಳ್ಳು—ಮೋಸದ್ದು, ಛಲದ್ದು. ಅದನ್ನು ಕಲಿಯಲೇಕೆ? ಬೇಡ' ಎಂದು. ಭಿಕ್ಷುವಿಗೆ ತಾಯಮಾತು ಸರಿ ಎನಿಸಿತು. ಇಂಗ್ಲೆಂಡು ಬಿಟ್ಟು ಹಿಂದಿರುಗಿದರು.

ಹಿಂದಿರುಗಿದಾಗ ೧೯೦೫. ವಂಗಭಂಗ ಚಳುವಳಿಯ ಸಮಯ. ಬಂಗಾಲದ ಹುಡುಗರೆಲ್ಲ ಒಟ್ಟಾಗಿ ಶಾಲೆ-ಕಾಲೇಜಿಗೆ ಬಹಿಷ್ಕಾರ ಹಾಕಿದ್ದರು. ಒಂದು ಪಿಳ್ಳೆಯೂ ಶಾಲೆಗೆ ಹೋಗುತ್ತಿರಲಿಲ್ಲ. ಇವರಿಗಾಗಿ ಒಂದು ವಿದ್ಯಾಪೀಠವನ್ನು ತೆರೆಯುವ ಏರ್ಪಾಟು ಮಾಡಿದರು. ಆ ರಾಷ್ಟ್ರೀಯ ವಿದ್ಯಾಪೀಠಕ್ಕೆ ಅರವಿಂದಘೋಷರೇ ಪ್ರಿನ್ಸಿಪಾಲರು. ಭಿಕ್ಷು ಭಾರತಕ್ಕೆ ತಿರುಗಿ ಬಂದ

ಕೂಡಲೆ, ಆ ವಿದ್ಯಾಪೀಠದಲ್ಲಿ ಪಾಲೀ ಪ್ರೊಫೆಸರ್ ಆದರು. ಅಲ್ಲಿ ಒಂದು ವರ್ಷ ಕಳೆಯಿತು.

ಆಮೇಲೆ ಮತ್ತೆ ಬರ್ಮಾಕ್ಕೆ ಹಿಂದಿರುಗಿದರು. ಮೊದಲೇ ಧೀರಜೀವಿ, ದೇಶಾಭಿಮಾನ ಇದ್ದೇ ಇತ್ತು. ಬಂಗಾಲದಲ್ಲಿ ರಾಷ್ಟ್ರೀಯತೆಯ ಪರಿಚಯವೂ ಆಯಿತು. ಆ ಹೃದಯಕ್ಕೆ ಬರ್ಮಾದ ನೀರಸಜೀವನ ಸಹಿಸಲಿಲ್ಲ. ರಾಷ್ಟ್ರೀಯತೆ ದೇಶಾಭಿಮಾನಗಳು ಇಲ್ಲದ ಬರ್ಮಾ ಜನಜೀವನಕ್ಕೆ ಮರುಗಿದರು. ಆ ಮರುಕ ದೊಡ್ಡ ಬಿರುಗಾಳಿಯಾಗಿ ಪರಿಣಮಿಸಿತು. ಸ್ವದೇಶೀ, ರಾಷ್ಟ್ರೀಯತೆ, ಸಮಾಜಸುಧಾರಣೆಗಳ ಸಂದೇಶಗಳನ್ನು ಸಾರುತ್ತ ಊರೂರು ತಿರುಗಿದರು. ಬರ್ಮಾದೇಶ ಹೊಸ ಕಳೆಯಿಂದ ಬೆಳಗಿತು. ಹೊಸ ಹುರುಪಿನ ತೆರೆಯೊಂದು ಎದ್ದಿತು.

ಮೊದಲೇ ಪೋಲೀಸರಿಗೆ ಭಿಕ್ಷುವಿನ ಮೇಲೆ ಕಣ್ಣು. ಬಂಗಾಲದಲ್ಲಿ ಸುರೇಂದ್ರನಾಥ ಬ್ಯಾನರ್ಜಿ, ಅರವಿಂದ ಘೋಷರ ಜೊತೆಯಲ್ಲಿ ಇದ್ದರು' ಎಂದು ಆಪ್ತವಾದ ವರದಿ ಬಂದಿದ್ದುವು. ಅಲ್ಲದೆ ಬಂಗಾಲದಲ್ಲಿ ಸಂನ್ಯಾಸಿ ಗಳೆಂದರೆ ಸರಕಾರಕ್ಕೆ ಅಂಜಿಕೆ. ಒಮ್ಮೆ ಸಂನ್ಯಾಸಿಗಳ ದಂಗೆಯೇ ಒಂದು ಆಗಿ ಸರಕಾರಕ್ಕೆ ತೇಲುಗಣ್ಣು ಮೇಲುಗಣ್ಣಾಗಿತ್ತು. ಈ ಭಿಕ್ಷು ಇಷ್ಟೆಲ್ಲ ಸಾಲದೆ, ದೊಡ್ಡ ಸುಂಟರಗಾಳಿಯಂಥ ಚಳುವಳಿಯನ್ನೇ ಹೂಡಿದ್ದಾನೆ. ಬರ್ಮಾ–ಪೋಲೀಸರ ಕಣ್ಣು ಭಿಕ್ಷುವಿನ ಸುತ್ತಲೂ ಪಂಜರದಂತೆ ಹೆಣೆದು ಕೊಂಡುಬಿಟ್ಟಿತು. ಜನರಿಗೆ ಇಂತಹವು ಬೇಗನೆ ಗೊತ್ತಾಗುತ್ತವೆ. ಭಿಕ್ಷುವಿ ಗಿಂತ ಮೊದಲೇ ಅವರಿಗೆ ಇದು ತಿಳಿಯಿತು. 'ಜನರು ಭಿಕ್ಷುವಿನೊಡನೆ ಮಾತಾಡಿದರೆ ಏನೋ' ಎಂದು ಹೆದರಿದರು. ಗೆಳೆಯರು, ಬಳಗ ಎಲ್ಲರೂ ದೂರ ಸರಿದರು. ಇಂಥ ಪರಿಸ್ಥಿತಿಯಲ್ಲಿಯೂ ಭಿಕ್ಷು ಹಿಡಿದ ಕೆಲಸ ಬಿಡಲಿಲ್ಲ. ಒಂದು ವರ್ಷದವರೆಗೆ ಪ್ರಚಾರ ನಡೆಯಿಸಿದರು.

ಇಷ್ಟು ಹೊತ್ತಿಗೆ ಜಪಾನಿಗೆ ಹೋಗುವ ಬಯಕೆ ಆಗಿತ್ತು ಭಿಕ್ಷುವಿಗೆ. ಜಪಾನು ಬೌದ್ಧಧರ್ಮಕ್ಕೆ ಇನ್ನೂವರೆಗೆ ಆಸರೆಯಾಗಿದೆ. ಅದನ್ನು ನೋಡಿ, ಆ ಧರ್ಮದ ಈಗಿನ ರೂಪ ತಿಳಿದುಕೊಳ್ಳಬೇಕು. ಜಪಾನಿಗೆ ಹೋದ ಮೇಲೆ ಭಿಕ್ಷು ಅಗಸ್ತ್ಯ ಭ್ರಾತರಾಗಿ ಉಳಿಯಲಿಲ್ಲ. ಕ್ಯೋಟೋ ನಗರ ದಲ್ಲಿನ ಜಾಪಾನೀ ವಿಶ್ವವಿದ್ಯಾನಿಲಯದಲ್ಲಿ ಪಾಲೀ ಪ್ರೊಫೆಸರ್ ಆದರು.

ಬೌದ್ಧ ದರ್ಶನಕ್ಕೂ ಅವರೇ. ಜಪಾನೀ ಹುಡುಗರಿಗೆ ಬೌದ್ಧ ದರ್ಶನವನ್ನು ಜಪಾನೀ ನುಡಿಯಲ್ಲಿಯೇ ಕಲಿಸುವುದು ಉತ್ತಮವೆಂದು ಅವರಿಗೆ ತೋರಿತು. ಸರಿ; ಕೂಡಲೆ ಜಪಾನೀ ಭಾಷೆಯನ್ನು ಕಲಿತರು, ಆಗ ಚೀಣದ ಕೆಲವು ವಿದ್ಯಾರ್ಥಿಗಳು ಜಪಾನಿನಲ್ಲಿ ಓದುತ್ತಿದ್ದರು. ಅವರೆಲ್ಲರೊಡನೆ ಭಿಕ್ಷುವಿನ ನಿಕಟಪರಿಚಯವಾಯಿತು. ಆ ಗುಂಪಿನಲ್ಲಿ ಚೀಣದ ಸರ್ವೋದ್ಧಾರಕ್ಕೆ ಕಾರಣನಾದ ಸನ್-ಯಾಟ್-ಸೇನನೂ ಇದ್ದ.

ಕ್ಯೋಟೋ ವಿಶ್ವವಿದ್ಯಾಲಯದ್ದು ಮೂರು ವರ್ಷ ಕರಾರು. ಆ ಅವಧಿಯಲ್ಲಿ ಬಂದ ಸಂಬಳವನ್ನು ಕೂಡಿಟ್ಟು, ಗಡುವು ಮುಗಿಯುತ್ತಲೇ ಮತ್ತೆ ಯಾತ್ರೆಗೆ ಮೊದಲುಮಾಡಿದರು. ಚೀನ, ಕೊರಿಯಾ, ಮಂಗೋಲಿಯಾ, ಮಂಚೂರಿಯಾ, ಸೈಬೀರಿಯಾಗಳನ್ನೂ ಸುತ್ತಿದರು. ಸೈಬೀರಿಯಾದ ಹಾದಿಯಿಂದ ಯುರೋಪಿಗೆ ಹೋಗಿ, ಅದನ್ನೆಲ್ಲಾ ನೋಡಿ ಅಮೇರಿಕಾಕ್ಕೆ ಹೋದರು. ಹೊರಟ ಅವರು ಹಾಗೆಯೇ ಪ್ರಪಂಚವನ್ನು ಒಂದು ಸುತ್ತು ಹಾಕಿದರು. ಕೆನಡಾ, ಆಸ್ಟ್ರೇಲಿಯಾ, ಆಫ್ರಿಕಾ-ತಿರುಗಿ ಬರ್ಮಾಕ್ಕೆ ಸೇರಿದರು. ಆದರೂ ಬರ್ಮಾದಲ್ಲಿ ನಿಲ್ಲಲಿಲ್ಲ. ಪಡುವಣ ದೇಶಗಳ ಉದ್ಯೋಗ–ಕುಶಲತೆಯನ್ನು ನೋಡಿ, ಹಿಂದುಸ್ತಾನದ ಮುಂದಾಳುಗಳು ಬೆರಗಾಗಿ, ನಮ್ಮವರೂ ಹಾಗೆಯೆ ಯಂತ್ರಚಾಲನಕುಶಲರಾಗಬೇಕೆಂದು ಲೆಕ್ಕಹಾಕುತ್ತಿದ್ದ ಕಾಲ. ಆ ಕಲೆಯನ್ನು ಕಲಿಯಲು ಎಷ್ಟೋಜನ ಕಷ್ಟಪಟ್ಟು ಪರದೇಶಗಳಿಗೆ ಹೋಗಿ, ಅಲ್ಲಿ ಕೂಲಿ ಮಾಡಿಯಾದರೂ ಕಲಿತು ಬರುತ್ತಿದ್ದರು. ಭಿಕ್ಷುವಿಗೂ ಆ ಹಾದಿಯಲ್ಲಿ ರುಚಿಕಂಡಿತು. ಬರ್ಮಾದಿಂದ ಹನ್ನೆರಡು ಜನರ ಗುಂಪೊಂದನ್ನು-ವಿದ್ಯಾರ್ಥಿಗಳದು–ಕರೆದುಕೊಂಡು, ಭಿಕ್ಷು ಮತ್ತೆ ವಿಲಾಯತಿಗೆ ಹೊರಟರು. ಅದರಲ್ಲಿ ಅವರ ತಂಗಿಯು ಒಬ್ಬಳು. ಭಿಕ್ಷುವು 'ಹೆಣ್ಣು ಕಸ' ಎಂದು ತಿಳಿದಿರಲಿಲ್ಲ. 'ರಾಷ್ಟ್ರ–ನಿರ್ಮಾಣದ ಕೆಲಸದಲ್ಲಿ ಆಕೆಯ ನೆರವೂ ಅಗತ್ಯ. ಆಕೆಗೂ ಅದೊಂದು ಕರ್ತವ್ಯ' ಎಂಬುದು ಅವರ ಭಾವನೆ. ಅರ್ಧಜನವನ್ನು ಜಪಾನಿನಲ್ಲಿ ಸೇರಿಸಿದರು. ಉಳಿದವರನ್ನು ಅಮೇರಿಕಾಕ್ಕೆ ಕರೆದುಕೊಂಡು ಹೋದರು. ಅಲ್ಲಿಂದ ಮರಳಿ ಜಪಾನಿಗೆ ಬಂದು ಆಸ್ಟ್ರೇಲಿಯಾ, ಪೂರ್ವ ಹಿಂದೀದ್ವೀಪಗಳು, ಜಾವಾ, ಸುಮಾತ್ರಾ, ಇಂಡೋಚೀನ್, ಕ್ಯಾಂಬೋ-ಡಿಯಾ, ಸಯಾಂಗಳ ಮಾರ್ಗವಾಗಿ ಹಿಂದುಸ್ತಾನಕ್ಕೆ ತಿರುಗಿ ಬಂದರು.

ಮರಳಿ ಬರುವಾಗ ಮಹಾಯುದ್ಧ ಪ್ರಾರಂಭವಾಗಿತ್ತು. ರಹದಾರಿ ಸಿಗುವುದು ಕಷ್ಟ. ಜಪಾನಿನಿಂದ ಆಸ್ಟ್ರೇಲಿಯಾಕ್ಕೆ ಬರುವಾಗ, ರಹದಾರಿಯ ಅಧಿಕಾರಿ ಭಿಕ್ಷುವನ್ನು ಹೆದರಿಸಿದ. 'ಆಸ್ಟ್ರೇಲಿಯಾಕ್ಕೆ ಯಾಕೆ ಹೋಗುತ್ತೀ? ಜರ್ಮನ ಎಮ್‌ಡನ್ ಎಲ್ಲಾದರೂ ಮುಳುಗಿಸಿ ಬಿಟ್ಟೀತು' ಎಂದ. ಉತ್ತಮನಿಗೆ ಈ 'ಸಾವ ಭೀತಿ'ಯೇ? 'ಸತ್ತರೆ ಹಲವು ಬಾರಿಯಲ್ಲ, ಒಂದೇ ಸಲ, ಅದೂ ನನ್ನ ಜೀವ ತಾನೆ! ನಿನಗೆ ಏತರ ಅಂಜಿಕೆ!' ಎಂದು ಕೇಳಿದರು.

ಪ್ರಪಂಚಯಾತ್ರೆಯನ್ನು ವಿಲಾಸ-ವಿನೋದಗಳಿಗಾಗಿ ಭಿಕ್ಷು ನಡೆಯಿಸಲಿಲ್ಲ. ಹೋದ ಹೋದಲ್ಲೆಲ್ಲ ಭಾರತೀಯ ಸಂಸ್ಕೃತಿಯ ಬಗ್ಗೆ ಜನರಿಗೆ ಹೇಳಿದರು. ಎಲ್ಲ ಕಡೆಯೂ ಜನ ಬಹಳ ಆದರದಿಂದ ಇವರ ಭಾಷಣಗಳನ್ನು ಕೇಳುತ್ತಿದ್ದರು. ಮೆಚ್ಚಿಯೂ ಮೆಚ್ಚುತ್ತಿದ್ದರು. ಆದರೇನು? ಕಡೆಗೆ ಫಲ ಮಾತ್ರ ಬೂದಿಯಲ್ಲಿ ಮಾಡಿದ ಹೋಮ. 'ಎಲ್ಲಾ ಚೆನ್ನಾಗಿದೆ ಸರಿ. ಬಹಳ ಸೊಗಸು. ಆದರೆ ಇದಕ್ಕೆ ನಾವೇಕೆ ಮನ್ನಣೆ ಕೊಡಬೇಕು? ಇದು ಗುಲಾಮರ ಧರ್ಮ' ಅಂದುಬಿಡುತ್ತಿದ್ದರು.

ಈ ಪರಾಧೀನತೆಯ ಕಹಿ ಅನುಭವ, ಹೋದ ಹೋದಲ್ಲೆಲ್ಲ ಭಿಕ್ಷುವಿಗೆ ಆಯಿತು. 'ಎಷ್ಟೇ ಉತ್ತಮ ಧರ್ಮವಿರಲಿ, ಸ್ವತಂತ್ರ ಜನಾಂಗವಲ್ಲದವರ ಧರ್ಮಕ್ಕೂ ಬೆಲೆಯಿಲ್ಲ' ಎಂಬುದು ಮನವರಿಕೆಯಾಯಿತು. 'ಸ್ವಾತಂತ್ರ್ಯ ಬರುವವರೆಗೆ ನಮ್ಮ ಧರ್ಮದ ಪ್ರಚಾರ ಮಾಡುವುದು ಕೂಡಾ ಅಸಾಧ್ಯ-ಅಸಂಭವ' ಎಂಬ ನಿಲುಕಿಗೆ ಬಂದರು. ಬೌದ್ಧಧರ್ಮ ಪ್ರಚಾರಕನಾಗಿದ್ದ ಭಿಕ್ಷು ಆ ವಿಚಾರವನ್ನು ನೆನೆನೆನೆದು,'ಸ್ವಾತಂತ್ರ್ಯ ಸೇನೆಯ ಸಿಪಾಯಿ ಆದರು. ಮಠ-ಮಂದಿರಗಳನ್ನು ಬಿಟ್ಟು ಸಾರ್ವಜನಿಕ ಸೇವೆಯ ಸಮುದ್ರದಲ್ಲಿ ಧುಮುಕಿದರು.

ಕೆಲವು ದಿನ ಸ್ವತಂತ್ರವಾಗಿ ತಮ್ಮಷ್ಟಕ್ಕೆ ತಾವೇ ಏನಾದರೂ ಸೇವೆಯನ್ನು ಮಾಡುತ್ತಿದ್ದರು. ಗಾಂಧೀಜಿ ಕಾಂಗ್ರೆಸ್ಸಿಗೆ ಕಾರ್ಯೋತ್ಸಾಹವನ್ನು ದಾನಮಾಡಿದಾಗ (೧೯೨೦ ರಲ್ಲಿ) ಭಿಕ್ಷುವಿಗೂ ಹಿಂದುಸ್ತಾನದ ಸಮರೋತ್ಸಾಹ ತಿಳಿಯಿತು. ತಾವೂ ಕಾಂಗ್ರೆಸ್ಸಿಗೆ ಸೇರಿದರು. ೧ ವರ್ಷ ಶಿಕ್ಷೆಯೂ ಆಯಿತು. ಆ ಗದ್ದಲದಲ್ಲಿ ಜೈಲಿನಿಂದ ಹೊರಗೆ ಬಂದಾಗ ಗಯಾ ಕಾಂಗ್ರೆಸ್ ಮೊದಲನೆಯ ಸಲ ಕಾಂಗ್ರೆಸ್ಸಿನ ಜನ ಈ ಕೇಸರೀ ಬಣ್ಣದ ಸಂನ್ಯಾಸಿ

ಯನ್ನು ನೋಡಿದುದು ಈ ಬೌದ್ಧಕ್ಷೇತ್ರದಲ್ಲಿಯೇ. ಮುಂದೆ ೨-೩ ವರುಷ ಗಳೊಳಗಾಗಿಯೆ ಬರ್ಮಾದಲ್ಲಿ ಬಲವಾದ ರಾಜಕೀಯ ಚಳವಳಿ ಪ್ರಾರಂಭ ವಾಯಿತು. ಕೆಲವು ದಿನಗಳೊಳಗಾಗಿಯೆ ೩ ವರ್ಷದ ಶಿಕ್ಷೆಯಾಯಿತು, ಭಿಕ್ಷುವಿಗೆ. ಆ ಮೂರು ವರ್ಷ ಮುಗಿಸಿ ಹೊರಗೆ ಬಂದಾಗ ಮದರಾಸು ಕಾಂಗ್ರೆಸ್ಸು.

ಗಯಾ ಕಾಂಗ್ರೆಸ್ಸಿನ ತರುವಾಯ, ಯುದ್ಧಾನಂತರ ಯುರೋಪಿನ ಪರಿಸ್ಥಿತಿಯನ್ನು ನೋಡಲು ವಿಲಾಯತಿಗೆ ಹೋಗಿ ಬಂದಿದ್ದರು. ಈಗ ಮತ್ತೆ ಜಪಾನಿಗೆ ಹೊರಟರು. ಚೀಣಕ್ಕೂ ಹೋದರು. ಚೀಣದಲ್ಲಿ ಭಾರತ ಕಾಂಗ್ರೆಸ್ಸಿನ ಪ್ರತಿನಿಧಿಯಾಗಿ ಸನ್-ಯಾಟ-ಸೇನನ ಸಮಾಧಿಗೆ ಪುಷ್ಪಾಂಜ ಲಿಯ ಉತ್ಸವಕ್ಕೆ ಹೋಗಿದ್ದರು. ತಿರುಗಿ ಬಂದಾಗ ಲಾಹೋರ್ ಕಾಂಗ್ರೆಸ್; ಮುಂದೆ ಭಿಕ್ಷುವಿನ ದೇಶಾಟನೆ ನಿಂತುಹೋಯಿತು. ಕಲಕತ್ತೆಯ ಪೋಲೀ ಸರು ಅವರನ್ನು ಸೆರೆಹಿಡಿದು, ಅವರಲ್ಲಿದ್ದ ರಹದಾರಿಯನ್ನು ಕಿತ್ತುಕೊಂಡರು. ಮತ್ತೆ ಕೊಡಲೇ ಇಲ್ಲ. ಜಪಾನ್, ಜರ್ಮನಿ, ಅಮೇರಿಕಾ ದೇಶಗಳಿಂದ ಕರೆ ಬಂದಿತ್ತು. ಆದರೆ ರಹದಾರಿ ಮತ್ತೆ ಸಿಕ್ಕಲೇ ಇಲ್ಲ.

ಧರ್ಮವೇ ತನ್ನ ಸರ್ವಸ್ವವೆಂದು ನಂಬಿದ್ದ ಭಿಕ್ಷುವಿಗೆ ಕಾಂಗ್ರೆಸ್ಸಿನಲ್ಲಿ ನಿಲ್ಲುವುದು ಆಗಲಿಲ್ಲ. ಪಂಡಿತ ಮಾಲವೀಯರಂತೆ ಅವರಿಗೂ ಹಿಂದೂ ಮಹಾಸಭೆಯ ಬಗ್ಗೆ ಅಭಿಮಾನವಿತ್ತು. ಆ ಸೆಳೆತವೇ ೧೯೩೫ರಲ್ಲಿ ಉತ್ತಮ ನನ್ನು ಹಿಂದೂಮಹಾಸಭೆಯ ಅಧ್ಯಕ್ಷನನ್ನಾಗಿ ಮಾಡಿದ್ದು. ಮಹಾಸಭೆಯ ಅಧ್ಯಕ್ಷರಾಗಿ ಒಂದುವರುಷ ಭಾರತವನ್ನೆಲ್ಲ ಸುತ್ತಿದರು. ಅದುವರೆಗೆ ಹಾಗೆ ಯಾರೂ ಸುತ್ತಿರಲಿಲ್ಲ. ಉತ್ಸಾಹ, ಸರಲತೆ, ದೇಶಾಭಿಮಾನಗಳ ಮೂರ್ತಿ ಯೊಂದು, ದೇಶದಲ್ಲಿ ಗಾಳಿಗಾಲಿಂದ ಸುಳಿದಾಡಿದಂತಾಯಿತು. ಮಹಾ ಸಭೆಯಲ್ಲಿ ರಾಷ್ಟ್ರೀಯ ಭಾವನೆ ಕಂಡುಬಂತು. ಆದರೆ ಅದು ಬಹುಕಾಲ ನಿಲ್ಲಲಿಲ್ಲ. ನಿಲ್ಲಿಸಬಲ್ಲ ವ್ಯಕ್ತಿ ಮರ್ತ್ಯತ್ವವನ್ನು ನೀಗಿ ಅಮರರಾದರು.

ಸನ್-ಯಾಟ-ಸೇನರ ಸಮಾಧಿಗೆ ಪುಷ್ಪಾಂಜಲಿ ಅರ್ಪಿಸಿದ ಮಾತು ಬಂತಷ್ಟೆ. ಆ ಪ್ರಸಂಗದಲ್ಲಿ ಭಿಕ್ಷು ಉತ್ತಮ ನಡೆದುಕೊಂಡ ರೀತಿ ಹಿಂದು ಸ್ಥಾನಕ್ಕೆ ಎಂದೆಂದಿಗೂ ಗೌರವಬರುವ ರೀತಿ. ಆ ಚಿತ್ರ ಹಿಂದೀ ಜನ ಎಂದೂ ಮರೆಯಲಾರದ ಚಿತ್ರ. ಚೀಣದ ಜನರು ತಮ್ಮ ದೇಶದ ಪುನರು-

ಜ್ಜೀವನಕ್ಕೆ ಮುಖ್ಯ ಕಾರಣನಾದ ಸನ್-ಯಾಟ-ಸೇನ್ನನಿಗೆ ತೋರಬೇಕೆಂದು ಮಾಡಿದ ಗೌರವದ ಸಂದರ್ಭ. ಜಗತ್ತಿನ ಎಲ್ಲ ದೇಶಗಳ ಪ್ರತಿನಿಧಿಗಳನ್ನೂ ಕರೆಯಿಸಿದ್ದರು. ಭಾರತಕ್ಕೂ ಕರೆ ಬಂತು. ಆಗ ಕಾಂಗ್ರೆಸ್ಸಿಗೆ ಪಂಡಿತ ಮೋತಿಲಾಲರು ಅಧ್ಯಕ್ಷರು. ಭಾರತದ ಪ್ರತಿನಿಧಿಯಾಗಿ ಆ ಉತ್ಸವದಲ್ಲಿ ಪಾಲುಗೊಳ್ಳಲು, ಭಿಕ್ಷು ಉತ್ತಮರಿಗೆ ಅವರು ತಿಳಿಸಿದರು. ಉತ್ತಮ ಹೋದಾಗ ಅಲ್ಲಿಯ ಎಲ್ಲ ಏರ್ಪಾಡನ್ನೂ ತಿಳಿದುಕೊಂಡರು. ಎಲ್ಲಿ ಯಾರು ನಿಲ್ಲಬೇಕು, ಯಾರು ಮೊದಲು ಸಮಾಧಿಗೆ ಹೂ ಏರಿಸಬೇಕು, ಯಾರು ಕಡೆಗೆ, ಎಲ್ಲಾ ಕ್ರಮವಾಗಿ ನಿಶ್ಚಿತವಾಗಿತ್ತು. ಹಿಂದುಸ್ತಾನ ಪರಾಧೀನ ವಾದ ನಾಡು. ಅದಕ್ಕೆ ಕೊನೆಯ ಸ್ಥಾನ. ಭಿಕ್ಷುವಿಗೆ ಇದು ಸಹನವಾಗು ವುದು ಸಾಧ್ಯವೇ ? ಚೀಣದ ಮಂತ್ರಿಮಂಡಲದೊಡನೆ ಜಗಳವಾಡಿದರು. ತಮಗೆ ಪ್ರಧಮಸ್ಥಾನ ಸಿಗಬೇಕೆಂದು ವಾದಿಸಿದರು. 'ತಾವು ಜಗತ್ತಿನ ಜನಾಂಗಗಳಲ್ಲಿ ಎಲ್ಲಕ್ಕಿಂತ ದೊಡ್ಡ ಜನಾಂಗದ– ೩೮ ಕೋಟಿಯ ಪ್ರತಿನಿಧಿ. ಹಿಂದುಸ್ತಾನದೊಡನೆ ಚೀಣಕ್ಕೆ ಪುರಾತನ ಸಂಬಂಧ. ಅದೂ ಬಹಳ ಆಪ್ತ ರೀತಿಯದು. ಭಾರತವು ಚೀಣಕ್ಕೆ ಧರ್ಮಗುರು. ಈ ಕಾರಣ ಸಾಲವೆ? ಈಗಂತೂ ಭಾರತ ಪರಾಧೀನ. ಎಂತಲೇ ಚೀಣದ ಅತ್ಯಧಿಕ ಸಾನುಭೂತಿಗೆ ಪಾತ್ರ. ಸಾಲದುದಕ್ಕೆ ತಾವು ಚೀಣದ ಧರ್ಮ–ಭ್ರಾತೃ–ಬೌದ್ಧ. ಬೌದ್ಧ ರಲ್ಲಿಯೂ ಭಿಕ್ಷು. ಹೀಗೆ ಎಲ್ಲ ರೀತಿಯಿಂದಲೂ ಭಾರತಕಾಂಗ್ರೆಸ್ ಪ್ರತಿ ನಿಧಿಗೆ ಯೋಗ್ಯ ಮರ್ಯಾದೆ ಸಿಗಬೇಕು' ಹೀಗೆ ವಾದಿಸಿದರು. ಆ ಮಂತ್ರಿ ಮಂಡಲ ಒಳ್ಳೆಯ ಪೇಚಿಗೆ ಬಿತ್ತು. ಅಂತೂ ಕಡೆಗೆ ಹಿಂದುಸ್ತಾನಕ್ಕೆ ದ್ವಿತೀಯಸ್ಥಾನ ಕೊಟ್ಟರು. ಮೊದಲನೆಯದು ರೋಮಿನ ಪೋಪನ ಪ್ರತಿನಿಧಿಗೆ. ಸನ್-ಯಾಟ್-ಸೇನ ಕಿರಸ್ತಾನರಲ್ಲವೆ ?

ಪುಷ್ಪಾಂಜಲಿಯ ದೃಶ್ಯ ಬಹು ಗಂಭೀರವಾಗಿತ್ತು. ಎಲ್ಲರೂ ಸಜ್ಜಾಗಿ ನಿಂತಿದ್ದರು. ಎಲ್ಲಾ ಕಪ್ಪುಬಟ್ಟೆಗಳ ಕಡಲು. ನಡುವೆ ಭಿಕ್ಷು ಒಬ್ಬನೇ ಹಳದಿಯ ಬಣ್ಣದ ಕಪನಿಯವರು. ಪೋಪನ ಪ್ರತಿನಿಧಿ ಸದ್ದಿಲ್ಲದೆ ಹೋಗಿ ಮೊದಲು ಹೂ ಏರಿಸಿ ಬಂದ. ತರುವಾಯ ಈ ಸಂನ್ಯಾಸಿ ಹೆಜ್ಜೆಯಿಟ್ಟರು. ಜೊತೆಗೆ ನಾಲ್ಕು ಮಂದಿ ಶಿಷ್ಯರು. ಇವರು ಹೆಜ್ಜೆಯಿಟ್ಟಹಾಗೆ ಚೀಣದ ರಾಷ್ಟ್ರೀಯ ಬ್ಯಾಂಡ್ ಅಕಸ್ಮಾತ್ತಾಗಿ ಬಾರಿಸಿತು. ಅದು ಏರ್ಪಾಡಿನಲ್ಲಿರ

ಲಿಲ್ಲ. ಆದರೆ ಆ ಗಾಂಭೀರ್ಯದ ಸೆಳೆತ ಅಂಥದು. ಸಮಾಧಿಯ ಬಳಿ ಹೋದವರು ಸುಮ್ಮನೆ ಹೂ ಏರಿಸಲಿಲ್ಲ. ಮೂರು ಸಲ ಅದಕ್ಕೆ ಪ್ರದಕ್ಷಿಣೆ ಮಾಡಿದರು. ಜನ ಬೆರಗಾಗಿ ನೋಡುತ್ತಿತ್ತು. ಪ್ರದಕ್ಷಿಣೆ ಮುಗಿಸಿ, ನಮಸ್ಕಾರ ಮಾಡಿ ಬೊಗಸೆ ಹೂ ಅರ್ಪಿಸಿದರು. ತಟ್ಟನೆ ಬ್ಯಾಂಡು ನಿಂತಿತು. ಜನ ಪರವಶತೆಯಿಂದ ಭಿಕ್ಷುವನ್ನು ನಾಲ್ಕು ಉಪದೇಶದ ಮಾತಾಡೆಂದು ಕೂಗಿದರು. ಹನಿಗಣ್ಣಿಂದ ಉತ್ತಮ 'ಚೀಣಾಕ್ಕಾಗಿ ಭಾರತದ ಸಂಪೂರ್ಣ ಸಾನುಭೂತಿ ಇದೆ' ಎಂಬುದನ್ನು ತಿಳಿಸಿದರು.

ಶಾಂಘಾಯ ಪಟ್ಟಣದಲ್ಲಿ ಒಮ್ಮೆ ಅವರು ಸೀಖಗುರುದ್ವಾರದಲ್ಲಿ ವ್ಯಾಖ್ಯಾನಕೊಟ್ಟರು. ಅದರ ಪರಿಣಾಮವಾಗಿ ಬ್ರಿಟಿಷ್ ಪೋಲೀಸರು ಇವರ ಮನೆ ಹುಡುಕಬಂದರು. ಇವರು ಇದ್ದದ್ದು ಶಾಂಘಾಯಿಯ ಜಪಾನೀ ಭಾಗದಲ್ಲಿ. ಅದು ಅಂತರರಾಷ್ಟ್ರೀಯ ಪಟ್ಟಣ. ಹತ್ತು ಅಧಿಕಾರ ಅಲ್ಲಿ. ಬ್ರಿಟಿಷ ಅಧಿಕಾರಿ ಕೇಳಿದ: 'ನಿಮ್ಮಲ್ಲಿ ರಾಜದ್ರೋಹಕರ ಪುಸ್ತಕ ಇವೆಯೇ?' ಇವರ ಜೊತೆಗೆ ಇವರು ಇಳಿದಿದ್ದ ಮನೆಯ ಯಜಮಾನನೂ ಇದ್ದ. ಭಿಕ್ಷು 'ಬೇಕಾದಷ್ಟು ಇವೆ' ಎಂದರು. ಮನೆಯಾತ, ಅಧಿಕಾರಿ ಇಬ್ಬರೂ ಬೆದರಿದರು. ಅಧಿಕಾರಿ 'ಎಲ್ಲಿ, ಎಲ್ಲಿ' ಎಂದು ಒಟಗುಟ್ಟಿದ. 'ಇಲ್ಲಿ ನೋಡಿ, ಇಲ್ಲಿ ಇದರೊಳಗೆ' ಎಂದು ಭಿಕ್ಷು ತನ್ನ ಎದೆಯನ್ನು ತೋರಿದರು.

ಆ ಧೈರ್ಯ, ಆ ಉದ್ವೇಗವೇ ಭಿಕ್ಷುವಿನ ಜೀವನಕ್ಕೆ ಆ ಸೊಬಗನ್ನು ಕೊಟ್ಟುವು. ಬರ್ಮಾದಲ್ಲಿ ಹಣವಂತರಿಗೇನು ಕಡಮೆಯಿಲ್ಲ. ವಿದ್ಯಾವಂತರಿಗೇನೂ ಕೊರತೆಯಿಲ್ಲ. ಭಿಕ್ಷುಗಳಿಗೆ ಅದು ತೌರುಮನೆ. ಆದರೂ ಉತ್ತಮ–ಬೌದ್ಧ ಸಂನ್ಯಾಸಿ–ಬರ್ಮಾದ ಸ್ವಾತಂತ್ರ್ಯ ಸಮರದ ಬಾಸಿಗ ಕಟ್ಟಿಸಿಕೊಂಡರು.

## ಮೈಸೂರಿನ ಜೀವಶಿಲ್ಪಿ

# ವಿಶ್ವೇಶ್ವರಯ್ಯನವರು

ಮೈಸೂರಿಗೆ ಹೋದವರು ಬೃಂದಾವನಕ್ಕೆ ಹೋಗದೆ ಬರುವುದಿಲ್ಲ. ಬೃಂದಾವನ ಕನ್ನಂಬಾಡಿ ಕೆರೆಯ ಕೆಳಗೆ ಇರುವ ಸೊಂಪಾದ ತೋಟ. ಅಲ್ಲಿ ನಿಂತು ನೋಡಿದರೆ ಮೈಸೂರು ಇಷ್ಟು ಮುಂದೆ ಬಂದುದು ಹೇಗೆ ಎಂಬುದು ಅರ್ಥವಾಗುತ್ತದೆ. ಇಬ್ಬರು ದಿವಾನರು ಆ ಪುಣ್ಯಕ್ಕೆ ಭಾಗಿಗಳು. ಇಂದಿನ ಮೈಸೂರಿಗೆ ಈ ಜೀವಕಳೆ ಕೊಟ್ಟ ಶಿಲ್ಪಿಗಳಿಬ್ಬರು. ಒಬ್ಬರು ಬೃಂದಾವನ ವನ್ನು ರಚಿಸಿದ ಸೊಗಸುಗಾರರಾದ ಮಿರ್ಜಾ ಇಸ್ಮಾಯಿಲ್. ಇನ್ನೊಬ್ಬರು ಕನ್ನಂಬಾಡಿ ಕಟ್ಟೆಯನ್ನು ಕಟ್ಟಿದ ಗಡಸುಗಾರರಾದ ವಿಶ್ವೇಶ್ವರಯ್ಯನವರು.

ಕನ್ನಂಬಾಡಿ, ಕಾವೇರಿ ನದಿಗೆ ಆಣೆಕಟ್ಟು ಕಟ್ಟಿ ನೀರು ತರುಬಿ ನಿಲ್ಲಿಸಿದ ಕೆರೆ. ಕೆರೆಯ ಅಂಗಳ ವಿಸ್ತಾರವಾಗಿದೆ. ನೀರು ಸಮೃದ್ಧಿ. ಕೆರೆಯ ಕಾಲುವೆ ಯಲ್ಲಿ ಹರಿಯುವ ನೀರೇ ಒಂದು ಹೊಳೆ ನೀರಿನಷ್ಟಿದೆ. ಎಷ್ಟು ದೂರ ಹೋಗಿದೆ ಗೊತ್ತೆ ಈ ಕಾಲುವೆ ? ೬೦ ಮೈಲಿ ದೂರ. ಅಷ್ಟು ದೂರವೂ ಉದ್ದಕ್ಕೂ ಕಾಲುವೆಯ ಎಡಬಲದಲ್ಲಿ ಹಚ್ಚಗೆ ನಗುತ್ತಿರುವ ತೋಟ, ಗದ್ದೆ. ಮೊದಲಿಗೆ ಇದೆಲ್ಲ ಹೆಚ್ಚು ಕಡಿಮೆ ಕೆಲಸಕ್ಕೆ ಬಾರದ ನೆಲ; ಈಗಲ್ಲಿ ಭತ್ತ, ಕಬ್ಬು. ಪೈರಿಗಂತೂ ಮೋಸವೇ ಇಲ್ಲ. ಸದಾ ನೀರು ಹರಿಯುತ್ತದೆ.

ಇದು ವಿಶ್ವೇಶ್ವರಯ್ಯನವರ ಪುಣ್ಯ. ಅವರ ಯೋಜನೆಯೇ ಹಾಗೆ. ಏನು ಮಾಡಿದರೂ ಅದ್ಭುತ ಸಾಹಸ ! ಒಡಗಿತನದಲ್ಲಿ ದೊಡ್ಡ ಬಾಚಿ ಕೆಲಸ ವಿದ್ದ ಹಾಗೆ. ಸಣ್ಣ ಪುಟ್ಟ ಚಿಲ್ಲರೆ ಕೆಲಸ ಅವರ ಮನಸಿಗೆ ಹಿಡಿಸದು.

ನಮ್ಮ ನಾಡು–ಹಿಂದುಸ್ಥಾನ–ಚಿನ್ನದ ನಾಡು. ಹಾಲ್ಜೇನು ಹರಿವ ಹೊಳೆಬೀಡು; ಏಕೊ ಈಗ ಕೆಟ್ಟಕಾಲ ಬಂದಿದೆ. ಮತ್ತೆ ರನ್ನಗಳಸವೇರ ಬೇಕು; ಜಗತ್ತಿಗೇ ತಲೆಮಣಿಯಾಗಬೇಕು; ಅದಕ್ಕೆ ಚುಟಕ ವೈದ್ಯ, ಚಿಲ್ಲರೆ ಉಪಾಯ ಸಾಲದು. ಮೂವತ್ತು ಮೂರು ಕೋಟಿ ಜನ ನಮ್ಮವರು ಅವರೆಲ್ಲ ಮುಂಬರಿಯಬೇಕಾದರೆ ಹಿಂದುಸ್ಥಾನವನ್ನು ಮತ್ತೆ ಕಟ್ಟಬೇಕು; ಭವ್ಯವಾಗಿ

ಕಟ್ಟಬೇಕು. ಇದು ವಿಶ್ವೇಶ್ವರಯ್ಯನವರ ಹೊಂಗನಸು. ಅಮೆರಿಕಾ ದೇಶಕ್ಕೆ ನಾಡಪತಿ ಹೂವರ್ ಒಬ್ಬನಿದ್ದ; ಮನೆಗೆರಡು ರೇಡಿಯೊ, ತಲೆಗೆರಡು ಮೋಟರು ಬೇಕು; ಆಗ ನಮ್ಮ ಸಂಪದಭಿವೃದ್ಧಿ ತಕ್ಕಮಟ್ಟಿಗೆ ಆದಂತೆ ಅನ್ನು ತಿದ್ದ. ವೀರಶಿಲ್ಪಿ ವಿಶ್ವೇಶ್ವರಯ್ಯನವರದೂ ಅದೇ ರೀತಿ. ಮೈಸೂರು ಸಂಸ್ಥಾನದ ದಿವಾನರಾದಾಗ ತಮ್ಮ ಸಂಪದಭಿವೃದ್ಧಿ ಸೂತ್ರವನ್ನು ಹೇಳಿ ದರು; ನಾಡಿನಲ್ಲಿ ಹುಲ್ಲುಗುಡಿಸಲು ಹೋಗಬೇಕು; ಮನೆಮನೆಗೂ ಮಂಗ-ಳೂರು ಹಂಚಿರಬೇಕು; ಊರಿಗೊಂದು ಪಾಠಶಾಲೆ, ಅಚ್ಚುಕಟ್ಟಾದ ದಾರಿ, ಸೇದುವ ಬಾವಿ ಬೇಕು; ಸೋಮಾರಿತನ ಕಳೆದು ಜನ ದುಡಿತಕ್ಕೊಲಿಯ ಬೇಕು.

ಸೂತ್ರ ಹೇಳಿ ಭಾಷ್ಯಮಾಡಿ ಪಾಂಡಿತ್ಯ ತೋರಿಸುವ ಬರಿ ಆಡಂಬ ರದ ಜನವಲ್ಲ ಅವರು. ಮೈಸೂರಿನಲ್ಲಿ ಸಂಪದಭಿವೃದ್ಧಿಯ ಶಾಖೆಯೆ ಒಂದು ಮೊದಲಾಯಿತು ಅವರ ಕಾಲದಲ್ಲಿ. ಜಿಲ್ಲೆಜಿಲ್ಲೆಗೂ ಗ್ರಾಮೋದ್ಧಾರ ಶಾಖೆ; ಒಬ್ಬ ಅಧಿಕಾರಿ. ತಾಲೂಕು ತಾಲೂಕಿಗೂ ಒಂದೊಂದು ಸಮ್ಮೇಳನ; ಹಳ್ಳಿ ಹಳ್ಳಿಗೊಂದು ಗ್ರಾಮಸಂಘ (Village Union); ಅದಕ್ಕೊಂದು ಕಚೇರಿ. ಜೇನುಹುಳುಗಳ ಝೇಂಕಾರದಂತೆ ಜನರ ಕೆಲಸದ ಚುರುಕಿನ ದನಿ ಕೇಳಿಸುತ್ತಿತ್ತು. ಇದೆಲ್ಲ ಆಡಳಿತದ ಭಾಗವಾಯಿತು. ಜನಕ್ಕೂ ಆ ಹುರುಪಿ ಲ್ಲದಿದ್ದರೆ ಹೇಗೆ ? ರೈತರಿಗೆ ಒಳ್ಳೆ ತಳಿದನ ಬೇಕು, ದನದ ಜಾತ್ರೆ ನೆರೆಸು; ಕಾಯಿ ಪಲ್ಯದ ಬೆಳೆ ನಮ್ಮಲ್ಲಿ ಕಡಿಮೆ, ತೋಟವಾಳಿಕೆ ಪ್ರದರ್ಶನ ಏರ್ಪಡಿಸು; ಕೈಕಸಬಿನವರಿಗೆ ಹೊಸ ಹೊಸ ರೀತಿ ಗೊತ್ತಿಲ್ಲ, ಅವರದೆಲ್ಲ ಓಬಿರಾಯನ ಕಾಲದ ಪದ್ಧತಿ, ಹೊಸರೀತಿ ಬಲ್ಲವರನ್ನು ಕರೆಸು; ನಾಡಿನಲ್ಲಿ ಪ್ರಚಾರಕ್ಕೆ ಕಳಿಸು; ನಾಟಿ ಹತ್ತಿಗಿಂತ ಕಾಂಬೋಡಿಯಾ ಬೀಜ ಹಾಕಿದರೆ ಕೂರಿಗೆಗೆ ಖಂಡುಗ ಬೆಳೆ ಹೆಚ್ಚು, ವ್ಯವಸಾಯದ ಶಾಖೆ ಆ ಬೀಜ ತರಿಸಿ ಮಾರಲಿ; ಹಳ್ಳಿಗಳಲ್ಲಿ ನಾರು ಹುಣ್ಣಿನ ಕಾಟ ಬಹಳ, ಇಳಿಯುವ ಬಾವಿ ಮುಚ್ಚಿ ಸೇದುವ ಬಾವಿ ಮಾಡು. ಅದೊಂದು ಸುಂಟರಗಾಳಿ. ನಾಡಿನ ಹೊಲಸ ನ್ನೆಲ್ಲ ಹೊತ್ತು ದೂರ ಸಾಗಿಸಬೇಕೆಂಬ ಸುಳಿಗಾಳಿ.

ಆ ಸುಳಿಗೆ ಸಿಕ್ಕಾಗ ನಾಡಿಗೊಂದು ಹೊಸ ಜನ್ಮ ಬಂತು.. ಹೊಸ ಹುಟ್ಟಿನ ಹಿಗ್ಗು ಪಡೆದ ಆ ಕಾಲದ ಜನರೇ ಪುಣ್ಯವಂತರು. ಅಲ್ಲಲ್ಲಿ ತೋಟಕ್ಕೆ

ನೀರೆತ್ತಲು ಪಂಪು ಬಂದವು; ಸಂತೆಗೆ ಬೆಳೆ ಸಾಗಿಸಲು ಚಲೋ ರಸ್ತೆಯಾದವು; ಸಂತೆ ದೂರವಿದ್ದಲ್ಲಿ ಸನಿಯದಲ್ಲೊಂದು ಹೊಸ ಸಂತೆ ಬೆಳೆಯಿತು; ಕೈಮಗ್ಗ ವಿದ್ದಲ್ಲಿ ಹಾರೋಲಾಳಿ ಮಗ್ಗ ಬಂತು. ವಿಶ್ವೇಶ್ವರಯ್ಯನವರ ದಿವಾನಗಿರಿ ಕಾಲ ಮಹಾ ಯುದ್ಧದ ಕಾಲ; ಆದರೂ ನಾಡಿನಲ್ಲಿ ಕಬ್ಬಿಣ ನೇಗಿಲು ಹೆಚ್ಚಿ ದುವು. ಜನರಲ್ಲಿ ತಿಳಿವಳಿಕೆ ಹೆಚ್ಚಲಿ ಎಂದವರ ಆಸೆ. ಆ ಆಸೆ ಎಷ್ಟು ಬಲವಾಗಿತ್ತೊ, ಆಳವಾಗಿತ್ತೊ ಹೇಳಲು ಸಾಧ್ಯವಿಲ್ಲ. Itinerary lecturers— ಊರೂರು ತಿರುಗಿ ಹಳ್ಳಿಯ ಜನಕ್ಕೆ ಪ್ರಪಂಚ ವಿಜ್ಞಾನವನ್ನು ತಿಳಿಸಲು ಸಂಚಾರೋಪನ್ಯಾಸಕರನ್ನು ನೇಮಿಸಿದರು. ಬರಿ ಉಪನ್ಯಾಸ ವಾದರೆ ಸಪ್ಪೆಯಾದೀತು; ಜನರಿಗೆ ಹಿಡಿಸಲಿಕ್ಕಿಲ್ಲವೆಂದು ಯಕ್ಷಿಣಿ ದೀಪವನ್ನು ಕೊಟ್ಟು ಚಿತ್ರ ತೋರಿಸಿ, ಉಪನ್ಯಾಸ ಕೊಡಿರೆಂದರು. ಜನಕ್ಕೆ ನಿಜವಾಗಿಯೂ ಆಗದೊಂದು ಯಕ್ಷಿಣಿ ದೀಪವೆ. ಕೆನಡಾದ ಗೋಧಿ ಹೊಲ, ಆಸ್ಟ್ರಿಯದ ಕುರಿಸೈನ್ಯ, ಜಾವಾದ ಸಕ್ಕರೆ ಗಿರಣಿ, ರಬ್ಬರ ತೋಟ—ಮುಂತಾದ ಚಿತ್ರಗಳನ್ನು ರೈತಲು ಕಣ್ಣಾಲ್ಲಿ ಕಣ್ಣಿಟ್ಟು ನೋಡಿದರು. ಅಂಟುರೋಗ ಹೇಗೆ ಹರಡುತ್ತವೆ ಎಂಬುದನ್ನೂ ಕಂಡರು. ಇಲ್ಲಿಗೆ ತೃಪ್ತಿಯಿಲ್ಲ ದಿವಾನರಿಗೆ. ಕೊಂಚ ಬಲಗೈಯಾದ ಊರಿಗೆಲ್ಲ ವಾಚನಾಲಯಗಳಾಗಲೆಂದರು; ಸಂಪದಭಿವೃದ್ಧಿ ಶಾಖೆಯ ಪರವಾಗಿ ಜಿಲ್ಲೆ ಜಿಲ್ಲೆಗೂ ಪತ್ರಿಕೆ ಹೊರಡಿಸಿರೆಂದರು; ಜನಕ್ಕೆ ಕತೆ ಕಾದಂಬರಿ ಕೊಟ್ಟು ಓದುವ ರುಚಿ ಬೆಳೆಸಬೇಕೆಂದು ಸಂಚಾರ ಪುಸ್ತಕ ಭಾಂಡಾರ ಗಳನ್ನು ಮೊದಲಿಟ್ಟರು. ಗ್ರಾಮ ಸಂಘಗಳಿಗೆ ಕೈ ತುಂಬ ಕೆಲಸವಾಯ್ತು. ಕೆಲವು ಕಾಲ ಬಲಾತ್ಕಾರ ಪ್ರಾಥಮಿಕ ವಿದ್ಯಾಭ್ಯಾಸ ನಡಸಿ ನೋಡಿದರು. ಭಾರತ ಸರಕಾರವಿನ್ನೂ ಆ ವಿಷಯ ಚರ್ಚೆ ಮಾಡುತಿತ್ತು. ಆಗಲೆ ವಿಶ್ವೇಶ್ವರಯ್ಯನವರದನ್ನು ಇಲ್ಲಿ ಪ್ರಯೋಗಮಾಡಿ ನೋಡಿಯೇ ಬಿಟ್ಟರು.

ಜನ ತಮ್ಮ ಏಳಿಗೆಗೆ ತಾವೇ ಕರ್ತರು. ಸಾರ್ವಜನಿಕರು ಮುಂದೆ ಬರಬೇಕು; ಜನಹಿತಕ್ಕಾಗಿ ದುಡಿಯಬೇಕೆಂದು ಉಪದೇಶಿಸಿದರು. ಹಳ್ಳಿ ಹಳ್ಳಿಗೆ ತಾವೇ ಹೋಗಿ "ಇಲ್ಲಿ ತಿಪ್ಪೆ ಹಾಕಬಾರದು; ಗೋಡೆಗೆ ಸಗಣಿ ಬಗ್ಗಡ ಬಡಿಯುತ್ತಾರೆಯೇ, ಬೆಳ್ಳಗೆ ಸುಣ್ಣ ಬಳಿಯಬೇಕು; ದನದ ಗೋದಲಿ ಇಷ್ಟು ನಾತವಾದರೆ ಹೇಗೆ?" ಎಂದು ರೈತರನ್ನು ಕಂಡು ಮಾತಾಡುತ್ತಿದ್ದರು.

ಗಂಡಭೇರುಂಡದ ಚಿನ್ನದ ಪದಕಗಳನ್ನು ಮಾಡಿಸಿ, ಮುಂದೆ ನಿಂತು ಸೇವೆ ಮಾಡಿದವರನ್ನು ಪ್ರೋತ್ಸಾಹಿಸಿದರು.

ಹಳ್ಳಿ ಬೆಳೆದರಾಯಿತೆ, ದಿಳ್ಳಿಯೂ ಬೆಳೆಯಬೇಕು. ಮೈಸೂರಿನ ನಗರಗಳು ಬಲಗೊಳ್ಳಬೇಕಾದರೆ ಕೈಗಾರಿಕೆಯೆ ದಾರಿ. ಚಿನ್ನದ ಗಣಿ ಮೈಸೂರಿನದಾದರೂ ಚಿನ್ನ ಪರರದು. ಅದೊಂದು ಗೋಳುಗತೆ; ಹೋಗಲಿ. ಕವಿ ಹಾಡಿಲ್ಲವೆ, ' ಗಂಧದ ಗುಡಿಯಿದು ಮೈಸೂರು '. ಶ್ರೀಗಂಧ ಮೈಸೂರಿನ ಸೊತ್ತು, ಕನ್ನಡ ನಾಡಿನ ಹೆಮ್ಮೆ. ಗಂಧದೆಣ್ಣೆ ಮಾಡಿ ವಿಲಾಯತಿಗೇ ಕಳಿಸಿದರು. ಮರ್ತ್ಯಲೋಕದ ಚೆದುರೆ ಸ್ವರ್ಗದಪ್ಸರೆಗೇನು ಕಡಿಮೆಯೆಂದು ಇಂದ್ರನನ್ನೆ ಮೂದಲಿಸಿದಂತೆ ! ಗಂಧದೆಣ್ಣೆಯ ಸಾಬೂನು ತಯಾರಾಯಿತು. ಅದಕ್ಕೆ ಮೊದಲು ಸ್ವದೇಶಿ ಸಾಬೂನೆ ನಮ್ಮಲ್ಲಿ ಬಳಿಕೆ ಇರಲಿಲ್ಲ. ವಿಲಾಯತಿಯಲ್ಲಂತೂ ಭಾರತದ್ದೆಂಬ ಸಾಮಾನೆ ಇರಲಿಲ್ಲ. ಮೈಸೂರಿನ ಗಂಧದ ' ಗುಡಿ ' ಈಗ ಜಗತ್ತಿನಲ್ಲೆಲ್ಲ ಹಾರುತ್ತಿದೆ.

ಗಂಧವೊಂದರಿಂದೇನಾದೀತು ? ಇದು ಯಂತ್ರಯುಗ. ಕಬ್ಬಿಣದ ಕಾಲ. ಕಬ್ಬಿಣ ಮಾಡುವ ಸೀಮೆಗೆ ಸೋಲಿಲ್ಲ, ಅಳಿವಿಲ್ಲ. ಬಿಹಾರ ಪ್ರಾಂತದಲ್ಲಿ ಕಬ್ಬಿಣ ಕಾರಖಾನೆಯಾದರೆ ನಮ್ಮಲ್ಲೇಕೆ ಬೇಡ ? ನಮ್ಮಲ್ಲಿ ಅದಿರಿಲ್ಲವೆ? ಅಡವಿಗೆ ಕಡಿಮೆಯೆ ? ರೋಗ ತುಂಬಿ ಖಿಲವಾಗುತ್ತಿರುವ ಮಲೆನಾಡು ಏಳಿಗೆಯಾಗಲು ಆ ಕಾಡಿಗೊಂದು ಉಪಯೋಗಬೇಕು. ಕಬ್ಬಿಣ ಯಾವಾಗಲೂ ಹೊರಗಿನಿಂದ ಬರಬೇಕೆಂದರಾದೀತೆ ? ನಮ್ಮ ಕಾಲಮೇಲೆ ನಾವು ನಿಲ್ಲಬೇಕು; ಅದೇ ಸ್ವದೇಶಿ. ಬರಿಯ ಬಾಯಬ್ಬರದಿಂದೇನು ಲಾಭ ? ಹೀಗೆಯೇ ಭದ್ರಾವತಿಯ ಕಬ್ಬಿಣ ಕಾರಖಾನೆ ಮೊದಲಾದದ್ದು. ಈಗದು ಮೈಸೂರಿನ ಜಾಂಷೆದ್‌ಪುರ. ಬೆಂಕಿಕಡ್ಡಿ ಕಾರಖಾನೆ, ಕಾಗದದ ಕಾರಖಾನೆ, ಸಿಮೆಂಟಿನ ಕಾರಖಾನೆ ಈಗ ಅಲ್ಲಿ ಚಿಗುರಿವೆ.

ವಿಶ್ವೇಶ್ವರಯ್ಯನವರ ಯೋಜನೆ ಬರೀ ಒಮ್ಮುಖವಲ್ಲ; ಸರ್ವಾಂಗ ಪರಿಪುಷ್ಟ. ಕೋಟೆಯ ಗೋಡೆ ಕಟ್ಟಿದರೆ ಮನೆಯಾದೀತೆ ? ವಾಸಕ್ಕೆ ಕಿಟಕಿ ಬಾಗಿಲು ಗಾಳಿ ಬೆಳಕು ಎಲ್ಲಾ ಬೇಕು. ದೇಶದ ಸಂಪತ್ತು ಬೆಳೆದಂತೆ ವಾಣಿಜ್ಯ, ವ್ಯಾಪಾರ ಬಲವಾಗಬೇಕು. ಸುವ್ಯವಸ್ಥಿತವಾಗಬೇಕು. ಈ ದೃಷ್ಟಿಯೆ ಮೈಸೂರು ಬ್ಯಾಂಕು, ಮೈಸೂರು ಚೇಂಬರ್ ಆಫ್ ಕಾಮರ್ಸ

ಗಳಿಗೆ ಜನ್ಮ ಕೊಟ್ಟುದು. ಮೈಸೂರಿಗೆ ಮೋಟರು ಕಾರ್ಖಾನೆ ವಿಮಾನಶಾಲೆ ಬೇಕೆಂದು ವಿಶ್ವೇಶ್ವರಯ್ಯ ಬಹಳ ಹಂಬಲಿಸಿದರು. ಅಷ್ಟೇ ಅಲ್ಲ, ರೇವು ಇಲ್ಲದೆ ಮೈಸೂರು ಸರ್ವಾಂಗ ಪರಿಪೂರ್ಣವಾಗದು; ಹಿಂದಿನ ಕನ್ನಡ ರೇವು ಪಟ್ಟಣ ಭಟ್ಕಳ ಮತ್ತೆ ಮೈಸೂರಿಗೆ ಸೇರಲೆಂದು ಸಾಹಸಪಟ್ಟರು. ಈ ಮುಂದೋಟ ಅವರ ದಿವಾನಗಿರಿಗೇ ಸಂಚಕಾರ ತಂದಿತೋ ಏನೋ! ಅದು ರಾಜಕೀಯ ರಹಸ್ಯ; ಬ್ರಿಟಿಷ್ ಸರಕಾರದ ಕೈಚಳಕ. ಅದೇನೇ ಇರಲಿ, ಮೋಟರು ಕಾರ್ಖಾನೆ ವಿಮಾನಶಾಲೆ ಮಾತ್ರ ಮುಂಬಯಿ ಸೇಠರ ಅನುಗ್ರಹ ದಿಂದ ಬೆಂಗಳೂರಿಗೆ ಸದ್ಯ ದಕ್ಕಿವೆ. ಭಟ್ಕಳ ಇನ್ನೂ ಕನಸಾಗಿಯೇ ಉಳಿದಿದೆ.

ಬರೀ ಅನ್ನದೇವರಪೂಜೆ ಮಾಡಿದರಾಯಿತೆ? ಇನ್ನು ದೇವರಿಲ್ಲವೆ? ನರಜನ್ಮಕ್ಕೆ ಬರಿ ಹಿಟ್ಟಾದರೆ ಸಾಲದು. ತಿಳಿವು ಬೇಕು; ತಿಳಿವಿಗೆ ಸಮನಿಲ್ಲ. 'ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೆ' ಎಂದು ಶ್ರೀಕೃಷ್ಣ ಹೇಳಿದಾನೆ. ವಿಶ್ವೇಶ್ವರಯ್ಯನವರಿಗೆ ಇದು ಗೊತ್ತು. ಸ್ವಯಂ ವಿದ್ವಾಂಸರು. ಪಂಡಿತರ ಮನೆತನ. ಅವರ ಕಾಲದಲ್ಲಿಯೆ ಕರ್ನಾಟಕ ಸಾಹಿತ್ಯ ಪರಿಷತ್ತು ಮೊದ ಲಾದದ್ದು. ಅದರ ಬೀಜ ಬಿತ್ತಿದ ನಂಜುಂಡಯ್ಯನವರು ಇವರ ಬಳಗ; ನೀರು ಹಾಕಿ ಬೆಳೆಸಿದ ಕರ್ಪೂರ ಶ್ರೀನಿವಾಸರಾಯರು ಇವರ ಹೆಜ್ಜೆಯಲ್ಲಿ ಹೆಜ್ಜೆ ಇಟ್ಟ ಶಿಲ್ಪಿ; ಮೈಸೂರಿಗೆ ಇವರಂತೆಯೆ ಪ್ರಧಾನ ಇಂಜಿನಿಯರಾಗಿದ್ದ ವರು. ಆದರೆ ತಮ್ಮ ಆರು ವರ್ಷದ ದಿವಾನಗಿರಿಯಲ್ಲಿ ವಿಶ್ವೇಶ್ವರಯ್ಯನವರು ನೀಡಿದ ಶ್ರೇಷ್ಠದಾನ ಮೈಸೂರು ವಿಶ್ವವಿದ್ಯಾನಿಲಯ. ಅಲ್ಲಿಯವರೆಗೆ ಮೈಸೂರು ಮಕ್ಕಳಿಗೆ ಮದರಾಸು ವಿಶ್ವವಿದ್ಯಾಲಯವೆ ಗತಿಯಾಗಿತ್ತು. ಅದನ್ನು ತಪ್ಪಿಸಿ ಮೈಸೂರಿಗೆ ಈ ಹೆಮ್ಮೆ ತಂದುಕೊಟ್ಟುದು ಅವರೆ. ಹಿರಿದಾದ ಹೈದರಾಬಾದು ಸಂಸ್ಥಾನ ಕೂಡ ಮೈಸೂರನ್ನು ನೋಡಿ ತಾನೂ ಒಂದನ್ನು ಮಾನೆಯ ವರ್ಷ ಕಟ್ಟಿಕೊಂಡಿತು. ಮನೆಯೆಂದರೆ ಬರಿ ಇಟ್ಟಿಗೆ ಗಾರೆಯಲ್ಲ; ದೇಶವೆಂದರೆ ಬಂಗಾರವೂ ಅಲ್ಲ, ಕಾರಖಾನೆಗಳೂ ಅಲ್ಲ. ಗಟ್ಟಿಮುಟ್ಟಾದ ಗೆಲುವಾದ ಜೀವಂತ ಜನ. ನಾಡಿನ ಕೀರ್ತಿ ಸಂಪತ್ತಲ್ಲ, ಸಂಸ್ಕೃತಿ. ಅಂತೆಯೆ ವಿಶ್ವೇಶ್ವರಯ್ಯನವರು ಇಂದಿನ ಮೈಸೂರಿಗೆ ಜೀವಶಿಲ್ಪಿ ಎಂದದ್ದು.

ಮೈಸೂರಿಗೆ ಮೊದಲು ಪ್ರಧಾನ ಇಂಜಿನಿಯರರಾಗಿ ಬಂದರು. ಈ ದೇಶಕ್ಕೆ ಅವರೇ ಆ ಪದವಿ ಪಡೆದ ಮೊದಲನೆ ಸ್ವದೇಶಿ ಇಂಜಿನಿಯರ್

ಮೊದಲು ವಿಲಾಯತಿಯವರ ಸರ್ವಸಾಮಾನ್ಯವಾಗಿತ್ತು ಆ ಸ್ಥಾನ. ತಿರು ವಾಂಕೂರಿನಿಂದ, ಬೇರೆ ಕಡೆಗಳಿಂದ ಕರೆ ಬಂದಿತ್ತು; ಆದರೆ ತಾಯಿನಾಡೆಂಬ ಪ್ರೀತಿಯಿಂದ ಮೈಸೂರಿಗೆ ಬಂದರು. ಅಲ್ಲಿಯ ತನಕ ಅವರ ಬದುಕೆಲ್ಲ ಸಂಸ್ಥಾನದ ಹೊರಗೆಯೆ ಕಳೆದು ಹೋಗಿತ್ತು. ಮೊದಲು ಮೈಸೂರಲ್ಲಿ ಇಂಜಿನಿಯರಿಂಗ್ ಓದಿರಲಿಲ್ಲವಲ್ಲ. ಪುಣೆಗೆ ಓದಲು ಹೋಗಿದ್ದರು. ಬಲು ಮೇಧಾವಿಯೆನಿಸಿಕೊಂಡರು; ಮೊದಲನೆಯವರಾಗಿ ತೇರ್ಗಡೆಯಾದರು. ಆಗ ಮುಂಬಯಿ ಸರಕಾರ ಮೊದಲನೆಯವರಾಗಿ ಬಂದವರಿಗೆ ಕರೆದು ಕೆಲಸ ಕೊಡುವ ವಾಡಿಕೆ ಇಟ್ಟುಕೊಂಡಿದ್ದಿತು. ವಿಶ್ವೇಶ್ವರಯ್ಯನವರಿಗಿನ್ನೂ ೨೩ ವರ್ಷ. ಅಸಿಸ್ಟೆಂಟ್ ಇಂಜಿನಿಯರರಾಗಿ ಬದುಕು ಮೊದಲಿಟ್ಟರು.

ಅವರ ಕೆಲಸದಲ್ಲಿ ಅವರಿಗೆ ಸಿಕ್ಕ ಅವಕಾಶ ಬಲು ಒಳ್ಳೆಯವು. ಸೂರತ್ ಪೌರಸಭೆಗೆ ಇಂಜಿನಿಯರಾಗಿದ್ದರು. ಸಕ್ಕೂರು ಆಣೆಕಟ್ಟು ಕಟ್ಟುವ ಕೆಲಸದಲ್ಲಿ ಅವರಿಗೂ ಪಾಲಿತ್ತು. ಇದನ್ನೆಲ್ಲ ಮಾಡಮಾಡುತ್ತ ಅವರಿಗೆ ವಿಲಾಯತಿ ಪ್ರವಾಸದ ಆಸೆ ಬೆಳೆಯಿತು. ತನ್ನ ಶಿಲ್ಪವಿದ್ಯೆಗೆ ವಿಲಾಯತಿ ತಾನೆ ಗುರುಪೀಠ! ೧೮೯೮ರಲ್ಲಿ–ಆಗವರಿಗೆ ೩೭ ವಯಸ್ಸು–ಚೀನಾ ಜಪಾನುಗಳಿಗೆ ಹೋಗಿಬಂದರು. ಆಗಲೆ ಜಪಾನಿನ ಸಂಪದಭಿವೃದ್ಧಿಯ ಗುಟ್ಟು ಅವರ ಮನಸ್ಸಿಗೆ ನಾಟಿದುದು. ಆಗಿನಿಂದಲೂ ಭಾರತವನ್ನು ಮತ್ತೆ ಕಟ್ಟಬೇಕೆಂಬ ಕನಸನ್ನು ಅವರು ಕಂಡಿದ್ದಾರೆ. ಜಪಾನೀ ಜನ ಸಾಧಿಸಿದುದು ನಮಗೆ ಅಸಾಧ್ಯವೆ ಎಂದು ಮನಸ್ಸಿನಲ್ಲಿ ಮಥನ ಮಾಡಿದಾರೆ.

ಹಿಂದಿರುಗಿ ಬಂದ ಮೇಲೆ ಮುಂಬಯಿ ಪ್ರಾಂತದ ನೀರಾವರಿ ಇಂಜಿನಿ ಯರಾದರು. ಮುಂಬಯಿಗೆ ಸಫಾಯಿ ಅಧಿಕಾರಿಗಳಾಗಿ ಬಹಳ ಸೇವೆ ಸಲ್ಲಿಸಿದರು. ಹಿಂದುಸ್ಥಾನದ ನೀರಾವರಿ ಸಮಸ್ಯೆಗಳ ಬಗ್ಗೆ ಅವರು ಮಾಡಿದ ಅಭ್ಯಾಸ ಸರ್ವಂಕಷವಾದುದು, ಉಳಿದವರಿಗೆ ಅಸಾಧ್ಯವಾದುದು. 'ನೀರಾವರಿ ವಿಚಾರಣೆ ಸಮಿತಿ' ಯೊಂದು ಏರ್ಪಾಟಾಗಿತ್ತಲ್ಲ; ಅದರಿದಿರು ವಿಶ್ವೇಶ್ವರಯ್ಯ ನವರು ನುಡಿದ ಸಾಕ್ಷ್ಯಕ್ಕೆ ಸಮಿತಿ ತಲೆದೂಗಿತು. 'ಇವರನ್ನು ಮೀರಿದ ಇಂಜಿನಿಯರ್ ಒಬ್ಬರೊ ಇಬ್ಬರೊ ಪ್ರಪಂಚದಲ್ಲಿ ಇದಾರೆಯೊ ಇಲ್ಲವೊ!' ಎಂದು ಬರೆದರು ತಮ್ಮ ವರದಿಯಲ್ಲಿ. ಇಲ್ಲಿಗೆ ೨೪ ವರ್ಷ ದುಡಿದಾಗಿತ್ತು. ಈ ಕೀರ್ತಿ ಬೇರೆ. ಇಷ್ಟಾದರೂ ಇವರಿಗೆ ಪ್ರಧಾನ ಇಂಜಿನಿಯರ್ ಕೆಲಸ

ಕೊಡುವ ಹಾಗಿರಲಿಲ್ಲ. ಏನಿದ್ದರೂ ಅದು ಬಿಳಿಯವರಿಗೇ ಮೀಸಲು ವಿಶ್ವೇಶ್ವರಯ್ಯನವರಿಗೆ ತುಂಬ ಬೇಸರವಾಯಿತು. ಈ ಅನ್ಯಾಯಕ್ಕೆ ಬಾಗದೆ ಕೆಲಸವನ್ನೇ ಬಿಟ್ಟರು.

ಕೆಲಸ ಬಿಟ್ಟಮೇಲೆ ಮತ್ತೆ ಸಮುದ್ರ ಪ್ರಯಾಣದಾಸೆಯಾಯಿತು. ಯುರೋಪು ಅಮೇರಿಕಾಗಳಿಗೆ ಹೋದರು. ಎಲ್ಲ ತಿರುಗಾಡಿ ರೋಂ ನಗರಕ್ಕೆ ಬಂದಾಗ ಭಾರತ ಸರಕಾರದಿಂದ ಕರೆಬಂತು. ಹೈದರಾಬಾದಿನಲ್ಲಿ ಮೂಸಾ ನದಿ ನೆಗಸು ಒಂದು ಜಲಪ್ರಳಯವಾಗಿತ್ತು; ಎಂಟೆಂಟು ದಿನ ಮರ ಹತ್ತಿ ಕೂತಿದ್ದು ಜನ ಜೀವ ಉಳಿಸಿಕೊಂಡರು. ಮತ್ತೆ ಈ ಅನಾಹುತವಾಗದಂತೆ ವ್ಯವಸ್ಥೆ ಮಾಡಲು ಸಮರ್ಥರಾದ ಇಂಜನಿಯರೊಬ್ಬರನ್ನು ಕಳಿಸಿರೆಂದು ಹೈದರಾಬಾದು ಸರಕಾರ ಭಾರತ ಸರಕಾರವನ್ನು ಬೇಡಿತು. ಅವರು ಒಡನೆಯೆ ಇವರಿಗೆ ತಿಳಿಸಿದರು. ಹಿಂತಿರುಗಿ ಬಂದವರೆ ವಿಶ್ವೇಶ್ವರಯ್ಯ ಹೈದರಾಬಾದಿನ ಕೆಲಸಕ್ಕೆ ಸೇರಿದರು. ಮೂಸಾ ನದಿ ಮೇರೆ ಹಿಡಿದು ಹರಿಯ ಬೇಕಾದರೆ ಮೇಲುಗಡೆ ಅದಕ್ಕೊಂದು ಆಣೆಕಟ್ಟು ಕಟ್ಟಿ ನೀರಿನ ವೇಗ ತಡೆಯ ಬೇಕೆಂದು ಊರಿನ ಮೇಲುಗಡೆ ಒಂದು ಕೆರೆ ಕಟ್ಟಿದರು. ಇತ್ತ ನೆಗಸಿಗೆ ರಾಮಬಾಣ, ಅತ್ತ ಸೀನೀರಿಗೆ ಸಮೃದ್ಧಿ. ಅದೇ ಉಸ್ಮಾನ ಸಾಗರ.

ವಿಶ್ವೇಶ್ವರಯ್ಯನವರು ಮೈಸೂರಿಗೆ ಬಂದಾಗ ಅವರಿಗೆ ಹಣದ ಆಸೆ ಇಂಗಿ ಹೋಗಿತ್ತು. ಅಥವ ಹಣಗಳಿಸಬೇಕೆಂದರೆ ಅವಕಾಶವಿಲ್ಲದೆಯೂ ಇರಲಿಲ್ಲ. ಮೈಸೂರು ದಿವಾನಗಿರಿ ಬಿಟ್ಟಮೇಲೆ ತಾನೆ ಅವರಿಗೆ ಸಂಪಾದನೆ ಕಡಮೆಯೆ? ಉದ್ಯೋಗವೆಂದು ಒಂದು ಸರಪಳಿ ಇಲ್ಲದಿದ್ದರೂ, ಆ ಸಮಿತಿಗೆ ಸದಸ್ಯರು, ಈ ಮಂಡಲಿಗೆ ಅಧ್ಯಕ್ಷರು ಎಂದು ಸಂಭಾವನೆ ಹೇರಳ ವಾಗಿ ಬರುತ್ತಲೇ ಇದೆ. ಭಾರತದ ಆರ್ಥಿಕ ವಿಚಾರಣಾ ಸಮಿತಿಗೆ ಅಧ್ಯಕ್ಷ ರಾಗಿದ್ದರು. ಮುಂಬಯಿ Backbay Reclamation Committee ಗೆ ಉಪಾಧ್ಯಕ್ಷರಾಗಿದ್ದರು. ಹೊಸ ದೆಹಲಿ ಕಟ್ಟಿದರಲ್ಲ: ಅದರ ಲೆಕ್ಕ ಪರಿಶೋಧ ನೆಯ ಸಮಿತಿಯಲ್ಲಿದ್ದರು. ಇನ್ನು ಎಷ್ಟೋ. ಕೈಗಾರಿಕೆ ಕುಬೇರರು ಈಗಲೂ ಅವರ ಸಲಹೆ ಕೇಳುತ್ತಲೇ ಇರುತ್ತಾರೆ. ಕೈಗಾರಿಕೆ ಲೋಕದಲ್ಲಿ ಅವರಿಗೆ ಬಹಳ ಮರ್ಯಾದೆ. ಅವರ ಸಮ್ಮೇಳನಕ್ಕೆ ಅಧ್ಯಕ್ಷರೂ ಆಗಿದ್ದರು. ಅಲ್ಲದೆ ಅವರಿಗೆ ಸಂಸಾರವೂ ಕಡಮೆ. ಮಕ್ಕಳಿಲ್ಲ. ಇದ್ದ ಒಂದು ಪ್ರಾಣಿ ಬಹಳ

ದಿನದ ಕೆಳಗೆಯೆ ತೀರಿಕೊಂಡಳು. ಅವರ ದೇಶಾರಾಧನೆಯ ಕಾರ್ಯ ಅಡ್ಡಿಯಿಲ್ಲದೆ ನಡೆಯಲೆಂದು ದೇವರು ಅವರಿಗೆ ಸಂಸಾರದ ಹೊರೆ ಕಡಿಮೆ ಮಾಡಿದಾನೆ.

ಅಂತಲೆ ಹೇಳಿದುದು: ಅವರು ಮೈಸೂರಿಗೆ ಬಂದುದು ಅಧಿಕಾರ ಲಾಲಸೆಯಿಂದಲ್ಲ; ತಾಯಿನಾಡಿನ ಸೇವೆಗೆ; ತಮ್ಮ ರಾಷ್ಟ್ರನಿರ್ಮಾಣದ ಕನಸಿಗೆ, ಸಂಪದಭಿವೃದ್ಧಿಯ ಯೋಜನೆಗೆ ರೂಪು ಕೊಡಲು ಅವಕಾಶ ದೊರೆಯಿತೆಂಬ ಆಸೆಯಿಂದ. ಅವರು ಮೈಸೂರಿಗೆ ಮಾಡಿದ ಸೇವೆ ಮೈಸೂರು ಮರೆಯುವಂತಿಲ್ಲ; ಕನ್ನಡನಾಡೂ ಮರೆಯಲಾರದು. ಇಂಥ ದೊಡ್ಡ ಶಿಲ್ಪಿಯ ಕೈವಾಡ ಇಡೀ ಕನ್ನಡನಾಡಿಗೆ ಲಭಿಸಲಿಲ್ಲವಲ್ಲ; ಲಭಿಸಿದ್ದರೆ ಹುಬ್ಬಳ್ಳಿ ಹೀಗಿರುತ್ತಿತ್ತೆ? ಭಟಕಳ ಹೇಗಿರುತ್ತಿತ್ತೊ? ಕನ್ನಡನಾಡು ಹರಿದು ಹಂಚಿಹೋಗಿದೆ. ನಮ್ಮ ದೇಶನಾಯಕರನ್ನು ನೆನೆದಾಗ ಈ ಮಾತು ಮನಸನ್ನು ಕವಿಯುತ್ತದೆ. ವಿಶ್ವೇಶ್ವರಯ್ಯನವರನ್ನು ನೆನೆದಾಗ ಅಂಬಿನಂತೆ ತಾಗುತ್ತದೆ.

ಹೌದು, ವಿಶ್ವೇಶ್ವರಯ್ಯನವರ ದೇಶಪ್ರೇಮ ಅಂಥದೆ. ರಾಜಕೀಯ ಸ್ವಾತಂತ್ರ್ಯಕ್ಕಾಗಿ ಅವರು ಮುಂದೆ ನಿಂತು ಹೆಣಗಲಿಲ್ಲ. ಗಾಂಧಿಯುಗ ಬರುವ ಹೊತ್ತಿಗಾಗಲೆ ಅವರು ಮೂರು ಸರಕಾರದ ನೌಕರಿ ಮುಗಿಸಿ, ಎಲ್ಲ ಕಡೆಯಲ್ಲಿಯೂ ಬೇಸರಗೊಂಡಿದ್ದರು. ಅವರ ಅನುಭವ ಅವರಿಗೊಂದು ಸತ್ಯ ತಿಳಿಸಿತ್ತು; ಆರ್ಥಿಕ ಸ್ವಾತಂತ್ರ್ಯವಿಲ್ಲದೆ ರಾಜಕೀಯ ಸ್ವಾತಂತ್ರ್ಯವಿಲ್ಲ. ನಮಗೆ ಬೇಕಾದುದು ಅರ್ಥಬಲ; ಅಂಗಬಲ ಸಾಕಷ್ಟಿದೆ. ಗಾಂಧೀಜಿ ಹೇಳಿಲ್ಲವೆ—ನಮ್ಮ ರಾಜ್ಯ ಕಳೆದವರು ನಮ್ಮ ವರ್ತಕರು. ಅವರೇ ಮತ್ತೆ ಅದನ್ನು ಗಳಿಸಬೇಕು. ದರಿದ್ರ ನಾರಾಯಣನ ಪೂಜಾರಿಯಲ್ಲವೆ ಅವರು? ಅಂತೆ ಗುರಿಯಲ್ಲಿ ಭೇದ ಕಡಿಮೆಯಾದರೂ ದಾರಿ ಮಾತ್ರ ಸ್ವಲ್ಪ ಬೇರೆ ಬೇರೆ.

ಗುರಿ ಒಂದೇ ನಿಜ. ಇಬ್ಬರಿಗೂ ಕಣ್ಣಿಗದು ಕಟ್ಟಿದೆ. ನಮ್ಮ ನಾಡಿನ ಬಡಬಗ್ಗರಿದಿರಿಗೆ ಬಂದರೆ ದೇವರು ಅನ್ನಾವತಾರವೆತ್ತಿ ಬರಬೇಕೆಂದರು ಗಾಂಧೀಜಿ. ವೆಂಕಟಪ್ಪನವರ ಚಿತ್ರಗಳನ್ನು ನೋಡಿ 'ನಿಮಗೆ ರಾಟೆ ಹಿಡಿಸಿದರೆ ಜನಜೀವನದಲ್ಲಿ ಅದಕ್ಕೆ ಎಂಥ ಸ್ಥಾನವಿದೆ ಎಂಬುದನ್ನು ಚಿತ್ರಿಸಿದರೆ ಸಂತೋಷ' ಎಂದರು. ವಿಶ್ವೇಶ್ವರಯ್ಯನವರು ಗೇರುಸೊಪ್ಪೆಗೆ ಹೋದಾಗ

ಆ ತಡಸಲನ್ನು ನೋಡಿ ಕಣ್ಣೀರಿಟ್ಟರಂತೆ ಒಂದು ಸಲ. ಅಲ್ಲಿರುವ ಬಿಡಾರದ ಘನೆಯ ಅಭಿಪ್ರಾಯದ ಪುಸ್ತಕದಲ್ಲಿ ಅವರು ಬರೆದ ಮಾತು ಆ ಸಂಗತಿ ಯನ್ನು ಮೊನೆಯಾಗಿ ತಿಳಿಸುತ್ತದೆ; Oh ! what a wash, my country-men ! 'ಎಲ್ಲಾ ವ್ಯರ್ಥವಾಗಿ ಹೋಗುತ್ತಿದೆಯಲ್ಲ ! ಅಯ್ಯೋ ! ದೇಶವೆ !' ಈ ನೋವು ದೊಡ್ಡ ತಪೋನಿಷ್ಠೆಯ ನೋವು; ದೇಶಾಭಿಮಾನದ ಕಾವು.

ವಿಶ್ವೇಶ್ವರಯ್ಯನವರು ಸಮಾಜ ಸಮಸ್ಯೆಗಳಿಗೂ ಮನಗೊಟ್ಟಿದ್ದರು. ಸಂಪದಭಿವೃದ್ಧಿ ಮಾತ್ರವೆ ಅಲ್ಲ. ಮೈಸೂರು ದೇಶದಲ್ಲಿ ಹರಿಜನರಿಗೆ ಸಾಮಾಜಿಕ ಸೌಕರ್ಯ ಬೇಕಾದಷ್ಟಿದೆ. ಆ ವಿಷಯದಲ್ಲಿ ಜನರು ಎಷ್ಟೋ ಮುಂದಿದಾರೆ. ಇದರ ಪುಣ್ಯ ವಿಶ್ವೇಶ್ವರಯ್ಯನವರಿಗೆ ಸಲ್ಲಬೇಕು. ಹರಿಜನರು ಸರಕಾರದ ಬಿಟ್ಟಿ ಕೆಲಸ ಮೊದಲಿಂದಲೂ ಮಾಡುತ್ತಿದಾರೆ. ಆದರೆ ಆ ದುಡಿತಕ್ಕೆ ಅವರಿಗೆ ದೊರೆತ ಪ್ರತಿಫಲ ಸೊನ್ನೆ. ಬಂಜರು ಭೂಮಿ ಇದ್ದ ಲ್ಲೆಲ್ಲ ಒಂದೆರಡೆಕರೆ ಹೊಲ ಕೊಟ್ಟು ಅದನ್ನೆಲ್ಲ ಸಾಗುವಳಿ ಮಾಡಿಸಿದರು ವಿಶ್ವೇಶ್ವರಯ್ಯನವರು. ಕೆರೆ ಕಾಲುವೆಗಳಲ್ಲಿ ಅವರಿಗೆ ನೀರಿಗೆ ಅಡ್ಡಿಮಾಡಬಾರ ದೆಂದರು. ಪಾಠಶಾಲೆಗಳಿಗೆ ಅವರನ್ನೂ ಸೇರಿಸಿಕೊಳ್ಳಬೇಕೆಂದು ಅಪ್ಪಣೆ ಮಾಡಿದಾಗಲಂತೂ ಮೈಸೂರಿನ ಜನ ಮುನಿದಿದ್ದರು. ಅಲ್ಲೊಂದು ಇಲ್ಲೊಂದು ರಾಷ್ಟ್ರೀಯ ಶಾಲೆ ಹುಟ್ಟಿದವು; ಹುಟ್ಟಿ ಸತ್ತವು. ಇದು ನಡೆ ದುದು ಹಿಂದಿನ ಮಹಾ ಯುದ್ಧದ ಪ್ರಾರಂಭದಲ್ಲಿ. ನಾಡಿನಲ್ಲಿ ಹರಿಜನೋ ದ್ಯಮದ ಬೀಜ ಕೂಡ ಬಿದ್ದಿರಲಿಲ್ಲ.

ಈ ವಿಶಾಲದೃಷ್ಟಿ ಅವರಿಗೆ ಹಿರಿಯರಿಂದ ಬಂದ ಗುಣ. ಅವರ ತಂದೆ—ಶ್ರೀನಿವಾಸ ಶಾಸ್ತ್ರಿಗಳು—ಕಾಶಿಯಲ್ಲಿ ಹತ್ತು ವರ್ಷ ಯೋಗಾಭ್ಯಾಸ, ವಿದ್ಯಾವ್ಯಾಸಂಗ ಮಾಡಿದವರು. ಸಾಹಿತ್ಯದಲ್ಲಿ ಚಲೋ ನೈಪುಣ್ಯ, ವೈದ್ಯ ದಲ್ಲಿ ಹೆಸರಾದ ಕೈ. ನಿಷ್ಠಾವಂತ ಬ್ರಾಹ್ಮಣ. ಚಿತ್ರಾವತಿ ನದಿಯಲ್ಲೊಂದು ದಿನ ಸ್ನಾನ ಮಾಡಿ ಬರುತ್ತಿದ್ದರಂತೆ. ದಾರಿಯಲ್ಲೊಬ್ಬ ಹೊಲೆಯ ಬಾಯಾರಿ ನೀರು ಕೇಳಿದ. ಸುತ್ತಲೂ ನೀರೆ ಇಲ್ಲ. ಶಾಸ್ತ್ರಿಗಳು ನೀರು ಹನಿಸಿದರು. ಸರಿ, ಸಮಾಜ ಬಹಿಷ್ಕಾರದ ವರೆಗೂ ಹೋಯಿತು. ಅವರೇನು 'ಜುಂ' ಅನ್ನಲಿಲ್ಲ. ೮೦–೮೫ ವರ್ಷದ ಕೆಳಗೆಯೆ ಈ ಮನೋವೈಶಾಲ್ಯ ತೋರಿದ ರಕ್ತ ಅವರ ಮಗನಲ್ಲಿ ಹರಿದು ಬಂದರೆ ಏನಚ್ಚರಿ ?

# ವಿಶ್ವೇಶ್ವರಯ್ಯನವರು

ಹಿಂದೂ ಮುಸ್ಲಿಮ ಸೌಹಾರ್ದದ ಬಗ್ಗೆ ಸುಲ್ತಾನಪೇಟೆ ಗಣಪತಿ ಪ್ರಕರಣದಲ್ಲಿ ಅವರು ಬರೆದ ವರದಿ ನಮ್ಮ "ಐಕ್ಯ ಸಾಹಿತ್ಯ" ದಲ್ಲಿ ಶಾಶ್ವತವಾಗಿರಬೇಕಾದ ಗ್ರಂಥ. ಆ ವಿಚಾರಣಾ ಸಮಿತಿಗೆ ಅಧ್ಯಕ್ಷರಾಗಿ ಅವರು ಮಾಡಿದ ಕೆಲಸ ಬೆಲೆ ಬಾಳುವ ಕೆಲಸ. ಹಿಂದೂ ಮುಸ್ಲಿಮ ಕಲಹದ ನಿದಾನ ಮಾಡಿ ಅವರು ಹೇಳಿದ ಒಂದು ಮಾತು ಅವರ ಸೂಕ್ಷ್ಮದೃಷ್ಟಿ, ಸ್ಪಷ್ಟಭಾಷೆ, ಸಾಹಿತ್ಯಶಕ್ತಿ ತೋರಿಸುತ್ತದೆ. 'ದೊಂಬಿಯಾದರೆ ತುರುಕ ದೊಣ್ಣೆ ತೆಗೆದುಕೊಳ್ಳುತ್ತಾನೆ; ಹಿಂದೂ ಲೇಖನಿ ಹಿಡಿಯುತ್ತಾನೆ.' ಈ ಮಾತು ಎಂಥ ಸತ್ಯ!

ವಿಶ್ವೇಶ್ವರಯ್ಯನವರಿಗೀಗ ೮೦ ವರ್ಷ. ಆರೋಗ್ಯವಾಗಿದಾರೆ. ಎತ್ತರ ತೆಳ್ಳಗಿರುವ ಮೈಕಟ್ಟು, ಮುಖದಲ್ಲಿ ತುಂಬು ಗಾಂಭೀರ್ಯ. ಇನ್ನೂ ದೃಢವಾಗಿದಾರೆ. ಅವರ ಆಹಾರ ವಿಹಾರ ನಿಯಮ ಆ ಮೈಗೆ ಆ ಬಲ ಕೊಟ್ಟಿವೆ; ಆ ತಾರುಣ್ಯವನ್ನು ಉಳಿಸಿವೆ. ತಮ್ಮ ೫೩ನೆ ವರ್ಷ ವಯಸ್ಸಿನಲ್ಲಿ ೩೫ ನಿಮಿಷದಲ್ಲಿ ನಂದಿಬೆಟ್ಟ ಹತ್ತಿ ಹೋಗುತ್ತಿದ್ದರಂತೆ. ಏಳು ವರ್ಷದ ಕೆಳಗೆ ೪೫ ನಿಮಿಷದಲ್ಲಿ ಹತ್ತಿದರು. ಅದೇ ಹೊತ್ತಿಗೆ ಸರ್. ಪಿ. ಶಿವಸ್ವಾಮಯ್ಯರ್ ಅವರ ಹಿಂದೆ ಡೋಲಿಯಲ್ಲಿ ಬರುತ್ತಿದ್ದರು.

ಗಾಂಧೀಜಿ ಮೈಸೂರನ್ನು ನೋಡಿ ರಾಮರಾಜ್ಯ ಎಂದರು ೧೩ ವರ್ಷದ ಕೆಳಗೆ. ಅದು ವಿಶ್ವೇಶ್ವರಯ್ಯನವರ ಅಖಂಡ ಸೇವೆಗೆ ಸಿಕ್ಕ ವರವೇನು?

# ಸಾಲಾರ ಜಂಗ್

ಆ ಕಾಲದಲ್ಲಿ ಹೈದರಾಬಾದಿನ ಮಂತ್ರಿಪದವಿಯೆಂದರೆ ಮುಳ್ಳಿನ ಹಾಸಿಗೆ. ದಿನಬೆಳಗಾದರೆ ಗಂಡಾಂತರ. ರಾಜ್ಯದಲ್ಲಿ ದೇಶಾಂತರದ ಪುಂಡ ಪಟಿಂಗರ ಹಾವಳಿ; ಜನನಾಯಕರಾದ ನವಾಬರೆಲ್ಲ ಸ್ವಕಾರ್ಯ ಧುರಂಧರರು; ಆಡಳಿತವೆಂಬುದು ಬರಿ ಶೂನ್ಯ; ರೈತರು ಕೊಟ್ಟ ತೆರಿಗೆಯೆಲ್ಲ ಕಾಕಭಾಜನ; ಅರಮನೆಯ ಕೋಶ ಬರಿದು; ದೊರೆಗಳ ಸಾಲ ಗಳಿಗೆಗಳಿಗೆಗೆ ಬೆಳೆವ ಹನುಮನ ಬಾಲ; ಸಾಲಗಾರರೊ ನಕ್ಷತ್ರಕರು. ತ್ರಿಕಾಲಸ್ನೇಹಕ್ಕೆ ಬದ್ಧರಾದ ಇಂಗ್ಲಿಷರ ರಾಜಕೀಯ ಅಸಲಿಗೇ ಮೋಸತರುವ ಚಾಕಚಕ್ಯ; ಇಂಗ್ಲಿಷು ಸಿಂಹ ವಿದರ್ಭದೇಶವನ್ನು (ಬಹಾರ್) ಬೇರೆ ಹೊಸದಾಗಿ ನುಂಗಿತ್ತು; ಈ ಪ್ರಾಂತವನ್ನು ಹೈದರಾಬಾದು ಕಳೆದುಕೊಂಡದ್ದು ತನ್ನ ಚಿಕ್ಕಪ್ಪನ ಕಾಲದಲ್ಲಿಯೆ; ಕಳೆದುಕೊಂಡ ಗಾಯ ಇನ್ನೂ ಹೊಚ್ಚಹೊಸದು. ತನ್ನ ವಯಸ್ಸು ಕೇವಲ ಇಪ್ಪತ್ನಾಲ್ಕು; ಅನನುಭವ; ದೊರೆ ಸುನ್ನಿ, ತಾನು ಷಿಯ್ಯಾ; ಸಾಲದುದಕ್ಕೆ ದೊರೆಗೆ ತನ್ನ ಮೇಲೆ ಅಪನಂಬಿಕೆ; ದೊರೆಯ ಸುತ್ತಲೂ ಪಿಸುಣ ಪರಿವಾರ. ಮುಳ್ಳಿನ ಹಾಸಿಗೆ ಕೂಡ ಇದಕ್ಕಿಂತ ಹಾಯಾಗಿದ್ದರೂ ಇರಬಹುದು.

ಸಾಲಾರ ಜಂಗ್‌ನ ಸಚಿವತನ ಮೊದಲಾದದ್ದು ಇಂಥ ಶುಭ ಪ್ರಸಂಗ ದಲ್ಲಿ. ಈ ಅಗ್ನಿಪರೀಕ್ಷೆಯಲ್ಲಿ ಕೂದಲು ಸಹ ಕೊಂಕದೆ ಗೆದ್ದು ಬಂದ ಧೀರ ಸಾಲಾರ ಜಂಗ್. ಈ ಕತ್ತಿಯಲಗಿನ ನಡಿಗೆಯಲ್ಲಿ ಹಲವಾರು ಸಲ ಸಚಿವೋತ್ತಮನೇ ತನ್ನ ಕಂಕಣ ಬಿಚ್ಚಿಟ್ಟ. ಕೆಲವು ಸಲ ನಿಜಾಮನೇ ಮಂತ್ರಿಗೆ ಕಡೆ-ತಾಂಬೂಲ ಕೊಟ್ಟಿದ್ದ. ಈ ಕಣ್ಣುಮುಚ್ಚಾಲೆಯಲ್ಲಿ ಕೊನೆಯ ತನಕ ಸಾಲಾರ ಜಂಗ್ ಸೋಲಲಿಲ್ಲ. ವಿಷೂಚಿಯಿಂದ ಕಣ್ಣು ಮುಚ್ಚುವವರೆಗೆ ಸಾಲಾರ ಜಂಗ್ ಸೋಲೆಂಬುದನ್ನು ಕಾಣಲಿಲ್ಲ. ಆತನ ಜಾತಕ ಅದೃಷ್ಟ ಜಾತಕ. ಇಲ್ಲದಿದ್ದರೆ ಆ ಕತ್ತಲುಗವಿಯಲ್ಲಿ ಬೆಳಕು ಬೆಳಗಿಸಿ ಆ ಕೋಲಾ-

ಹಲದಲ್ಲಿ ಕ್ರಮವಾದ ರಾಜ್ಯವನ್ನು ಕಟ್ಟುವುದು ಇನ್ನೊಬ್ಬರಿಗೆ ಸಾಧ್ಯವಿರ ಲಿಲ್ಲ. ಮೊಗಲಾಯಿ ಎಂದರೆ ಕಟ್ಟು ನಿಯಮ ಯಾವುದೂ ಇಲ್ಲದ್ದು—ಎಂದು ಈಗಲೂ ರೂಢಿಯಲ್ಲಿದೆ. ಕಾಣಲಾರದ, ಕೇಳಲಾರದ ವಿಚಿತ್ರ ತರಂಗಗಳ ಲೋಕ ಮೊಗಲಾಯಿ. ಆಗಂತೂ ಹೈದರಾಬಾದ ಶುದ್ಧ ಮೊಗಲಾಯಿ. ಅಂಥದಕ್ಕೆ ಜೀವತುಂಬಿ ಅದನ್ನು ಒಂದು ರಾಜ್ಯ ಅನಿಸುವಂತೆ ಮಾಡಿದ ಸಚಿವೋತ್ತಮ ಸಾಲಾರ ಜಂಗ್.

ಒಂದು ಸಲ ನಿಜಾಮನು ಮಂತ್ರಿಯನ್ನು ಮನೆಗೆ ಕಳಿಸುತ್ತಾನೆಂಬ ಸುದ್ದಿ ಊರೆಲ್ಲ ಹರಡಿತು. ಈ ಸುದ್ದಿ ಕೇಳಿ ರಾಣೀವಾಸದವರಿಗೆಲ್ಲ ಬಲು ನೋವಾಗಿ ಈ ಬೆಳತಿಗೆ ನಂದಿದರೆ ರಾಜ್ಯಕ್ಕೆ ಗತಿಯೇನು ಎಂಬ ಚಿಂತೆ ಯಾಯಿತು. ಕಡೆಗೆ ರಾಣೀವಾಸವೆಲ್ಲ ಒಗ್ಗಟ್ಟಾಗಿ ದೊರೆಗೊಂದು ಬಿನ್ನಹ ಪತ್ರಿಕೆ ಬರೆಸಿದರು: 'ಸಾಲಾರ ಜಂಗ್ ಬಹು ಸಮರ್ಥ; ಈತನನ್ನು ಕೆಲಸ ದಿಂದ ತೆಗೆಯಕೂಡದು. ಈತನನ್ನು ತಪ್ಪಿಸಿ ಪರರಿಗೆ ಸಚಿವತನ ಕೊಟ್ಟರೆ ನಾವೆಲ್ಲರೂ ಗೋಷಾ ಬಿಟ್ಟು ಹೊರಗೆ ಬಂದು ಹೊಸ ಮಂತ್ರಿಯ ಪಲ್ಲಕ್ಕಿ ಯನ್ನು ಮುರಿದು, ಅವನ ಕಡೆಯವರನ್ನು ಹೊಡೆದೋಡಿಸುತ್ತೇವೆ.' ನಮ್ಮ ಸಂಸ್ಥಾನಗಳ ಕಥೆಯಲ್ಲಿ ರಾಣೀವಾಸದವರು ಮಂತ್ರಿಯನ್ನು ಇಷ್ಟು ವಹಿಸಿ ಕೊಂಡುದು ಮತ್ತೆಲ್ಲಿಯೂ ಇಲ್ಲ. ನಿಜಾಮನು ವಿಧಿಯಿಲ್ಲದೆ ಸುಮ್ಮನಾದನಂತೆ. ಅಷ್ಟು ಜನಪ್ರಿಯತೆ, ಅಂಥ ಪ್ರಭಾವ ಸಾಲಾರ ಜಂಗ್‌ನದು.

ಜನ ತೋರಿಸಿದ ಅಭಿಮಾನ ಬರಿಯ ಕುರುಡು ಕೂಗಲ್ಲ. ಸಾಲಾರ ಜಂಗ್‌ನ ಸಾಮರ್ಥ್ಯ ಅಂಥದು. ಮೈ ದುರ್ಬಲವಾದರೂ ಅವನ ಮನಸ್ಸು ವಜ್ರದಂತೆ. ಹಿಡಿದ ಹಟ ಗೆಲ್ಲುವತನಕ ಬಿಡುವುಗಾಣದ ಪ್ರಯತ್ನ ಅವನದು; ಕಪಿಮುಷ್ಟಿ. ಆದರೂ ಹಟ ಸಡಿಲಿಸುವುದೇ ಗೆಲ್ಲುವ ದಾರಿ ಅನಿಸಿದರೆ ಹಟದ ಹೆಸರೇ ಮರೆಸಿ ಬಿಡುತ್ತಿದ್ದ. ಈ ತರಳತೆ ರಾಜನೀತಿಯ ಬ್ರಹ್ಮಾಸ್ತ್ರ. ಸಚಿವನ ಕೀರ್ತಿಗೆ ಕರುಬಿ, ತನ್ನ ಅಪ್ಪಣೆಯಿಲ್ಲದೆ ಊರಹೊರಗೆ ಹೋಗ ಕೂಡದು ಎಂದ ಒಬ್ಬ ದೊರೆ; ಊರ ಹೊರಗಲ್ಲ, ರೆಸಿಡೆಂಟನನ್ನು ಕಾಣ ಲಿಕ್ಕೂ ಅಪ್ಪಣೆಯಿಲ್ಲದೆ ಹೋಗಕೂಡದು ಎಂದ ಅವನ ಮಗ. ಸಾಲಾರ ಜಂಗ್ ಹಾಗೆಯೆ ತನ್ನ ಕೆಲಸ ನಡೆಸಿದ. ಒಮ್ಮೆ ದೊರೆಗೆ ಸಿಟ್ಟು ಬಂತು. ಸಚಿವ ಕ್ಷಮೆ ಬೇಡಲೇಬೇಕೆಂದು ಹಟ ಹಿಡಿದ. ಆಳವಾಗಿ ಯೋಚಿಸಿ ಅಸ್ತು

ಎಂದ ಸಚಿವ. ಅದೇ ಇಂಗ್ಲಿಷರಿಂದ ವಿದರ್ಭವನ್ನು ( ಬಹಾರ್ ) ಹಿಂದಿರುಗಿ ಪಡೆಯಲು ಸಾಲಾರ ಜಂಗ್ ಮಾಡಿದ ಪ್ರಯತ್ನ. ಆ ಹಟ ಇಂಗ್ಲಿಷು ಅಧಿಕಾರಿಗಳಿಗೆ ರುಚಿಸಲಿಲ್ಲ. ಸಾಲಾರ ಜಂಗ್‌ನ ನಿರೂಪಗಳಲ್ಲಿ ಬರೀ ಸ್ವಪ್ರತಿಷ್ಠೆಯೆಂದರು; ಹೈದರಾಬಾದು ದರ್ಬಾರು ಇನ್ನು ಮೇಲೆ ಎಚ್ಚರಿಕೆ ಯಿಂದಿರಬೇಕು ಎಂದು ಗುಡುಗಿದರು. ಈತ ಅದಕ್ಕೆ ಹೆದರುತ್ತಾನೆಯೆ ? ನಿಮ್ಮ ಸೇನೆಯ ವೆಚ್ಚಕ್ಕೆ ಸೀಮೆಯೇಕೆ, ೮೦ ಲಕ್ಷ ಪೌಂಡು ಇಡುಪು ಇಡುತ್ತೇನೆ ಎಂದು ಯುಕ್ತಿ ತೆಗೆದ. ಅದಕ್ಕೆ ಅವರೊಪ್ಪಲಿಲ್ಲ. ಹೋಗಲಿ, ಶ್ರೀರಂಗ ಪಟ್ಟಣ ಗೆಲ್ಲಬೇಕಾದರೆ ನಾವೂ ಮರಾಠರೂ ನಿಮಗೆ ಸಹಾಯ ಮಾಡಿದೆವಲ್ಲ: ಆಗ ಮೈಸೂರು ಸೀಮೆಯನ್ನು ಮೂರು ಪಾಲಾಗಿ ಹಂಚಿ ಕೊಡುವ ಮಾತಾಗಿತ್ತು; ಈಗ ಹುದುವಿನಲ್ಲಿದೆ, ನಮ್ಮ ಪಾಲು ನಮಗೆ ಕೊಡಿ ಎಂದು ಕೇಳಿದ. ನಿಮಗೇಕೆ ಕೊಡುವುದು ? ನಿಮಗೂ ಬೇಡ ನಮಗೂ ಬೇಡ ಎಂದು ಮೈಸೂರನ್ನು ಮೈಸೂರಿಗೇ ಬಿಟ್ಟುಕೊಟ್ಟರು ಇಂಗ್ಲಿಷರು. ಸಾಲಾರ ಜಂಗ್ ಉಪಾಯ ಹೂಡದಿದ್ದರೆ ಮೈಸೂರು ನಮ್ಮದೇ ಎಂದು ಇಂಗ್ಲಿಷರು ಬಹಿರಂಗವಾಗಿ ಹೇಳುವುದೊಂದೆ ಉಳಿದಿತ್ತು. ಮೈಸೂರಿನ ಮಾತು ಹೀಗೆ ಮುಗಿದಾಗ ಸಾಲಾರ ಜಂಗ್‌ನ ಚದುರಂಗದಾಟದಲ್ಲಿ ಮಂತ್ರಿಯೇ ಹೋದಂತಾಯಿತು. ಅಲ್ಲಿಗೂ ಅವನು ಮಣಿಯಲಿಲ್ಲ. ನಿಮ್ಮ ಸೇನೆ ನಮಗೇನೂ ಪ್ರಯೋಜನವಿಲ್ಲ, ಅದನ್ನು ತೆಗೆದು ಹಾಕಿ ಬಿಡಿ ಎಂದ; ಇಂಗ್ಲಿಷರೂ ಯುಕ್ತಿಯಲ್ಲಿ ಕಡಮೆಯಲ್ಲ. ಸರಕಾರಕ್ಕೆ ಇದು ಇಷ್ಟವಿಲ್ಲ; ಸುಮ್ಮನೆ ಈ ನಿರೂಪ ಕಳಿಸುವುದೇಕೆ ಎಂದು ಹೇಳಿ ಹೈದರಾಬಾದಿನ ರೆಸಿಡೆಂಟು ಅದನ್ನು ಹಿಂದಿರುಗಿ ಕಳಿಸಿದ. ಸಾಲಾರ ಜಂಗ್ ಅದನ್ನೆ ಮತ್ತೆ ಕಳಿಸಿದ. ಹಿಂದಿರುಗಿ ಕಳಿಸಿದ ನಿರೂಪ ಮತ್ತೆ ಕಳಿಸುವುದು ಮರ್ಯಾದೆಗೆ ಕಡಮೆಯೆಂದು ಇಂಗ್ಲಿಷರು ರೇಗಿದರು. ಸಾಲಾರ ಜಂಗ್ ಅಲ್ಲಿಗೂ ಬಿಡಲಿಲ್ಲ. ಮತ್ತೊಂದು ರೀತಿ ಸಂಧಾನ ಮಾಡಿದ. ಅವನ ಕಾಲದಲ್ಲಿ ವಿದರ್ಭ ಹಿಂದಿರುಗ ಲಿಲ್ಲ. ಈಗಲೂ ಇಲ್ಲ. ವಿದರ್ಭದ ಒಡೆತನ ನಿಜಾಮನದು ಎಂದು ಒಪ್ಪಿಸಿದ್ದಾ ಯಿತು. ಕೊನೆಯತನಕ ಸಚಿವೋತ್ತಮ ತನ್ನ ಪ್ರಯತ್ನವನ್ನು ಮಾತ್ರ ಬಿಡಲಿಲ್ಲ.

ಈ ಯುಕ್ತಿ, ಈ ಗಡಸುತನವೆ ಹೈದರಾಬಾದಿಗೆ ರೂಪು ಕೊಟ್ಟದು. ಸಂಬಳ ಸರಿಯಾಗಿ ಸಿಗದೆ ಸಿಪಾಯಿಗಳು ಕತ್ತಿ ಹಿರಿದು ಬೀದಿಬೀದಿ

ಅಲೆಯುತ್ತಿದ್ದರು ಈತ ಸಚಿವನಾದಾಗ. ಮೊದಲೆ ಅರಬರು. ಯಾವ ಹೊತ್ತಿಗೆ ಊರಿನಲ್ಲಿ ಏನಾದೀತೋ ಹೇಳಲು ಬರುವಂತಿಲ್ಲ. ಒಳನಾಡಿನಲ್ಲಿ ದೂರು ಕೇಳುವ ಅಧಿಕಾರಿಗಳೆ ಇಲ್ಲ. ಯಾರ ಹೊಲ ಯಾವುದೊ ಹೇಳಲು ಬರುವಂತಿಲ್ಲ. ತೆರಿಗೆ ಪದ್ಧತಿ ಅನ್ಯಾಯವಾಗಿತ್ತು. ಯಾವನಾದರೊಬ್ಬ ಬಲವಂತ ಇಂತಿಷ್ಟು ಸೀಮೆಗೆ ಇಂತಿಷ್ಟು ಗುತ್ತಿಗೆ ಮಾಡಿಕೊಂಡು, ಆ ಹಣ ಸರಕಾರಕ್ಕೆ ಮುಂಗಡ ಕೊಡುತ್ತಿದ್ದ. ಸರಿ, ಆ ಸೀಮೆಯಲ್ಲಿ ಅವನ ಹಾವಳಿಗೆ ಇದಿರಿಲ್ಲ. ಒಂದಕ್ಕೆ ಹತ್ತು ಅವನು ಸಲ್ಲಿಸಿಕೊಳ್ಳುತ್ತಿದ್ದ. ಜನರ ಯೋಗ ಕ್ಷೇಮಕ್ಕೆ ಕಂದಾಚಾರದವರ ಏರ್ಪಾಡು ಇರಲಿಲ್ಲ. ಕಳ್ಳರನ್ನೂ ಹಿಡಿದವರೇ ಇಲ್ಲ. ಸಾಲದ್ದಕ್ಕೆ ಹೆಜ್ಜೆಗೊಬ್ಬ ಇನಾಂದಾರ; ಮಾರಿಗೊಬ್ಬ ನವಾಬ. ಇವರ ವ್ಯವಹಾರ ಸ್ವತಂತ್ರ ದೊರೆಗಳಂತೆ. ಈ ಅರಾಜಕತೆಯ ಪುಂಡು ಪಾಳೆಯವನ್ನು ಅಣಗಿಸಲು ಮೊಟ್ಟಮೊದಲು ಗುತ್ತಿಗೆ ತೇಗೆಯ ಪದ್ಧತಿ ತಪ್ಪಿಸಿ ತೆರಿಗೆಯನ್ನು ನಿರ್ಣಯಿಸಿ ಅದನ್ನು ಬರಮಾಡಿಕೊಳ್ಳಲು ಸರಕಾರದ ಕಡೆಯ ಅಧಿಕಾರಿಗಳನ್ನು ನೇಮಿಸಿದ ಸಚಿವ. ಹೊಲಗದ್ದೆಯ ಬಗ್ಗೆ ಕಾಗದ ಪತ್ರ ಆಗ ಮೊದಲಾದವು. ಅಲ್ಲಿಯ ತನಕ ಕಾಜಿಯೊ ಮೌಲ್ವಿಯೊ ನ್ಯಾಯ ವಿಮರ್ಶೆ ಮಾಡುತ್ತಿದ್ದ. ಒಳನಾಡಿನಲ್ಲಿ ಅದೂ ಇರಲಿಲ್ಲ. ಮುಷ್ಟಿ ಹೇಳಿದ್ದೇ ಸರಿ ಆಗಿತ್ತು. ಸಾಲಾರ ಜಂಗ್ ನ್ಯಾಯವಿಚಾರಣೆಗೆ ಕಚೇರಿಗಳನ್ನು ಮೊದಲು ಮಾಡಿದ. ದೇಶವನ್ನು ಜಿಲ್ಲೆಗಳಾಗಿ ಭಾಗಿಸಿ ಕಂದಾಚಾರದ ಏರ್ಪಾಡು ಮಾಡಿದ ದೇಶದಲ್ಲಿ ನಿಕರವಾದ ನಾಣ್ಯವಿರಲಿಲ್ಲ. ಎಲ್ಲೆಲ್ಲೂ ಟಂಕಸಾಲೆಗಳೆ. ಇದನ್ನು ತಪ್ಪಿಸಿ ಒಳನಾಡಿನಲ್ಲಿ ಕೋಶಾಗಾರಗಳನ್ನು ನೆಲೆಗೊಳಿಸಿ ದೇಶದಲ್ಲೆಲ್ಲ ಸರಕಾರದ 'ಹಾಲಿ ಸಿಕ್ಕ' ನಾಣ್ಯ ಒಂದೇ ರೂಢಿಗೆ ಬರುವಂತೆ ಮಾಡಲು ಸಚಿವ ಪಟ್ಟ ಕಷ್ಟ ಅಷ್ಟಿಷ್ಟಲ್ಲ; ಇದಿರಿಸಬೇಕಾಗಿ ಬಂದ ಹಗೆಗಳು ಒಬ್ಬಿಬ್ಬರಲ್ಲ. ಇದರ ಜೊತೆಗೆ ಅರಬರ ಪುಂಡಾಟಿಕೆ, ರೋಹಿಲಾ ಜನರ ಬಿಚ್ಚುಗತ್ತಿ ಹೊಂಬಿ ಅಡಗಿಸಿ ಹಾಕಿದ್ದರಿಂದ ಎಷ್ಟೋ ಜನ ಸಾಲಾರ ಜಂಗ್‌ನಿಗೆ ಹಗೆಗಳಾದರು. ಹತ್ತು ಹನ್ನೆರಡು ಸಲ ಅವನ ಜೀವಕ್ಕೇ ಮುಳಿವು ಬಂದಿತ್ತು. ಕೋರೆಹಲ್ಲು ಮುರಿದುಕೊಂಡ ಪುಂಡರು ಕೆಲವರು ಮಂತ್ರಿ ಅರಮನೆಯಿಂದ ಹೊರಗೆ ಬರುವದನ್ನು ಕಾದಿದ್ದು ಗುಂಡು ಹಾರಿಸಿದರು. ದೈವಕೃಪೆಯಿಂದ ಮಂತ್ರಿಗೆ ತಗಲಲಿಲ್ಲ. ಕಡೆಗೆ ಕತ್ತಿ ಹಿರಿದು ನುಗ್ಗಿ ಬಂದರು; ತಾವೇ ಸಾವಿಗೆ ತುತ್ತಾದರು.

ಸಾಲಾರ ಜಂಗ್ ಯಾವುದಕ್ಕೂ ಎದೆಗುಂದುವ ಅಳಿಜೀವವಲ್ಲ. ಹೊಸ ಏರ್ಪಾಡು ಎಂದರಾಯಿತು, ಮನೆ ಮುಳುಗಿದಂತೆ ತಿಳಿದು ಅದನ್ನು ಇದಿರಿಸುವುದು ಜನರ ರೂಢಿ ಎಂಬುದನ್ನು ಬಲ್ಲ. ಹೊಸದು ಹೊಸದೆಂಬ ಈ ವಿರೋಧ ಬಹುಕಾಲ ನಿಲ್ಲದೆಂದು ಅವನಿಗೆ ಗೊತ್ತು. ಅಂತೇ ಧೈರ್ಯವಾಗಿ ಹೊಸಹೊಸ ಏರ್ಪಾಡು ಮಾಡಿದ. ದೊರೆಯ ಅನುಮಾನದ ಫಲವಾಗಿ ಹೊರನಾಡಿಗೆ ಹೋಗುವಂತಿರಲಿಲ್ಲ. ಸುವ್ಯವಸ್ಥಿತವಾದ ಇಂಗ್ಲಿಷ್ ರಾಜ್ಯ ಭಾರದ ಏರ್ಪಾಡನ್ನು ಕಣ್ಣಾರೆ ನೋಡುವ ಹಾಗಿಲ್ಲ. ರೆಸಿಡೆನ್ಸಿಯಲ್ಲಿ ನೋಡಿದುದೇ ಅವರ ಆಡಳಿತ; ಅವರಿಂದ ಇವರಿಂದ ಕೇಳಿದ ನಾಲ್ಕು ಮಾತು ಸಾಲಾರ ಜಂಗ್‌ನಿಗೆ ಅಷ್ಟೇ ಸಾಕಾಯಿತು. ಒಂದು ನೋಡಿದರೆ ಹತ್ತು ಊಹಿಸುವ ಚತುರ ಸ್ವಭಾವ. ಕುಂಪಣಿ ಸೀಮೆಯ ಆಡಳಿತ ಜನರ ಮನಸ್ಸಿಗೆ ಒಗ್ಗಿತೆಂಬುದನ್ನು ತಿಳಿದು ಅದನ್ನೆಲ್ಲ ಕೂಲಂಕಷವಾಗಿ ಕೇಳಿ ತಿಳಿದುಕೊಂಡ. ಅದಕ್ಕೆ ತನ್ನ ಚಾತುರಿ ಬೆರಸಿ ಹೈದರಾಬಾದನ್ನು ನಿರ್ಮಿಸಿದ.

ಬರೀ ಸುಂಕ ಸಿಪಾಯಿ ಏರ್ಪಾಡಷ್ಟೆ ಅಲ್ಲ. ಅದು ತಾತ್ಕಾಲಿಕವಾಗಿ ನಡೆಯಬೇಕಾಗಿದ್ದ ಶಸ್ತ್ರಕ್ರಿಯೆ. ಆದರೆ ಮೊಗಲಾಯಿ ಎಂಬುದು ಬಹು ಗಡುಸಾದ ಬೇನೆ. ದೂರ ದೃಷ್ಟಿಯಿಂದ ಸಾಲಾರಜಂಗ್ ಹಂಚಿಕೆ ಹಾಕಿದ, ಹಾಳುಬಿದ್ದ ಕೆರೆಗಳನ್ನು ಸರಿಮಾಡಿಸಿ ಎಷ್ಟೋ ಬೀಳುಹೂಲ ಸಾಗುಮಾಡಿದ. ಹೊಸದಾಗಿ ದಾರಿ ಮಾಡಿಸಿದ. ಹುಚ್ಚು ಹುಚ್ಚಾಗಿ ಹಬ್ಬಿದ್ದ ರುಸುಂ, ರಹದಾರಿ ಸುಂಕಗಳನ್ನು ನಿಲ್ಲಿಸಿದ. ಬೊಂಬಾಯಿಗೂ ಹೈದರಾಬಾದಿಗೂ ದೊಡ್ಡ ರಸ್ತೆ ಆದದ್ದು ಆಗಲೇ. ಅಂಚೆ ವ್ಯವಸ್ಥಿತವಾಯಿತು. ವ್ಯಾಪಾರ ಬೆಳೆಯಿತು. ದರೋಡೆಗಾರರಿಗೆ ಅಂಜಿ ವ್ಯಾಪಾರ ನಿಲ್ಲಿಸಿಬಿಟ್ಟಿದ್ದ ವರ್ತಕರಿಗೆ ಧೈರ್ಯ ಬಂತು. ಜನರ ಉಪಯೋಗಕ್ಕಾಗಿ ಅಲ್ಲಲ್ಲಿ ವೈದ್ಯಶಾಲೆಗಳನ್ನು ತೆರೆದರು. ವೈದ್ಯಕವನ್ನು ಕಲಿಸಲು ಶಾಲೆ ಮೊದಲಾಯಿತು. ವಾಸ್ತುಶಿಲ್ಪದ ಶಾಲೆ ಪ್ರಾರಂಭವಾಯಿತು. ವಿದ್ಯಾಪ್ರಚಾರವಾಗದೆ ಜನರಲ್ಲಿ ಸಂಸ್ಕೃತಿ ಬೆಳೆಯದೆಂದು ಮಂತ್ರಿ ಅತ್ತ ಕಡೆ ಬಹಳ ಗಮನಕೊಟ್ಟ. ಅನೇಕ ಶಾಲೆಗಳಾದವು. ನವಾಬರಿಗೆ ತಮ್ಮ ಮಕ್ಕಳನ್ನು ಶಾಲೆಗೆ ಕಳಿಸುವುದು ಮಾನಕ್ಕೆ ಕೀಳಾಗಿ ಕಂಡಿತು. ಮಂತ್ರಿ ತನ್ನ ಅಣ್ಣನ ಮಗನನ್ನು ಮೊದಲು ಕಳಿಸಿ ದಾರಿ ತೋರಿಸಿದ. ಎಲ್ಲಕ್ಕಿಂತ ಮುಖ್ಯವಾಗಿ ಹೈದರಾಬಾದಿನಲ್ಲಿ ರಾಜ್ಯಯಂತ್ರವೊಂದನ್ನು ಕ್ರಮಕ್ರಮವಾಗಿ ಸಿದ್ಧಪಡಿಸಿದ.

ರೇಲ್ವೆ ವಿಷಯ ಚರ್ಚೆಗಿಟ್ಟಿತ್ತು ಎಂದೆವಲ್ಲ. ವಿದರ್ಭದ ಮಾತ್ರೂ ಹಾಗೇ ಆಗಿತ್ತಷ್ಟೆ. ಸಾಲಾರ ಜಂಗ್‌ನ ಬುದ್ಧಿಕೌಶಲ, ಪರಿಪಾಲನಾ ಸಾಮರ್ಥ್ಯ ಕುಂಪಣಿಯವರ ಮನಸ್ಸಿಗೆ ಬಂದರೂ ಅವನ ಹಟ, ಅವನ ಸ್ವತಂತ್ರ ಬುದ್ಧಿ ಅವರಿಗೆ ಸರಿಬೀಳಲಿಲ್ಲ. ನಿಮ್ಮ ಸೇನೆ ಬೇಡವೆಂದದ್ದು ಕೆಲವರು ಅಧಿಕಾರಿಗಳಿಗೆ ಅತಿ ದಿಟ್ಟತನವಾಗಿ ಕಂಡಿತು. ಸಾಲದ್ದುದಕ್ಕೆ ಅದರ ಬದಲಾಗಿ ತಮ್ಮ ಸೇನೆಯನ್ನು ಯೂರೋಪಿಯನ್ ಅಧಿಕಾರಿಗಳ ನೆರವಿನಿಂದ ಸುಧಾರಿಸಲು ಅವನು ಮಾಡಿದ ಪ್ರಯತ್ನ ಅನುಮಾನಕ್ಕೆ ಕಾರಣವಾಯಿತು. ಯುವರಾಜ ಎಡ್ವರ್ಡ ಹಿಂದುಸ್ಥಾನಕ್ಕೆ ಬಂದಾಗ ಹೈದರಾಬಾದಿನ ನಿಜಾಮನನ್ನೆ ಕಲ್ಕತ್ತೆಗೆ ಬರಲು ಹೇಳಿಕಳಿಸಿದ. ದೊರೆಗೆ ಚಿಕ್ಕ ವಯಸ್ಸು. ಮೈಯಲ್ಲಿ ಚೆನ್ನಾಗಿರಲಿಲ್ಲ. ಸಾಲಾರ ಜಂಗ್ ಅದಕ್ಕೊಪ್ಪಲಿಲ್ಲ. ಅದೊಂದು ದೊಡ್ಡ ಪುರಾಣವಾಯಿತು. ಇಂಗ್ಲೆಂಡಿನ ಪತ್ರಿಕೆಗಳಲ್ಲಿ ಸಾಲಾರ ಜಂಗ್‌ನ ಬಗ್ಗೆ ಚರ್ಚೆಯಾಗುವಷ್ಟು ದೂರ ಹೋಯಿತು.

ಇಷ್ಟಾದರೂ ಅವನು ಇಂಗ್ಲಿಷರಿಗೆ ತೋರಿದ ಮೈತ್ರಿ, ಮಾಡಿದ ಸಹಾಯ ಅದ್ಭುತವಾದುದು. ಆ ಗೆಳೆತನಕ್ಕಾಗಿ ಸಾಲಾರ ಜಂಗ್ ತನ್ನವರ ರೋಷಕ್ಕೆ, ನಿಂದೆಗೆ ಗುರಿಯಾದ. ಪ್ರಾಣಕ್ಕೆ ಎರವಾಗಿದ್ದ. ಗೆಳೆಯರೇ ಅವನ ಮುಖ ಮುರಿದರು. ಆದರೂ ಮಂತ್ರಿ ಚಾಣಾಕ್ಷ. ತನ್ನ ಹಾದಿಯನ್ನೇ ಹಿಡಿದು ಸಾಗಿದ.

೧೮೫೭ ಹಿಂದುಸ್ಥಾನದ ಇತಿಹಾಸದಲ್ಲಿ ಬಹು ಮುಖ್ಯವಾದ ವರ್ಷ. ಹೈದರಾಬಾದಿನ ಕಥೆಯಲ್ಲೂ ಅಷ್ಟೆ. ಅಷ್ಟು ಹೊತ್ತಿಗೆ ಇಂಗ್ಲಿಷರು ಇಡೀ ಹಿಂದುಸ್ಥಾನವನ್ನು ಆಕ್ರಮಿಸಿಕೊಂಡಿದ್ದರು. ಇವರಿಗೆ ಸೋತು ರಾಜ್ಯ ಕಳೆದುಕೊಂಡವರ ಸಂತಾನಕ್ಕೆ ತಮ್ಮ ರಾಜ್ಯಗಳನ್ನು ತಿರುಗಿ ಗಳಿಸುವ ಬಯಕೆ ಪ್ರಬಲವಾಗಿತ್ತು. ಇವರಿಗೆ ಅನುಕೂಲವಾಗಿ ಕುಂಪಣಿ ಸೇನೆ—ನಮ್ಮ ಜನರದು—ಧರ್ಮದ ಜಗಳ ತೆಗೆದು ಸರಕಾರದ ಮೇಲೆ ತಿರುಗಿ ಬಿತ್ತು. ಹಿಮಾಲಯದಿಂದ ತುಂಗಭದ್ರೆಯ ವರೆಗೆ ನಾಡಿಗೆ ನಾಡೇ ಇಂಗ್ಲಿಷರ ವಿರುದ್ಧ ದಂಗೆಯೆದ್ದಿತು. ಸಾವಿರ ನಾಲಗೆಗಳ ದಳ್ಳುರಿ ಅದು. ಆ ಖಾಂಡವವನ ದಹನದಲ್ಲಿ ಹಿಂದುಸ್ಥಾನದಲ್ಲಿ ಹೇಳಹೆಸರಿಲ್ಲದೆ ಏನೇನು ಬೂದಿಯಾಗುತ್ತಿತ್ತೊ, ಏನು ಉಳಿಯುತ್ತಿತ್ತೊ ಹೇಳುವುದು ಕಷ್ಟ. ಹೈದರಾಬಾದು ನೆರವಾಗ

ದಿದ್ದರೆ ಇಂಗ್ಲಿಷರಿಗೆ ಬಹಳ ಕಷ್ಟವಿತ್ತು. ಅವರಿಗೂ ಇದು ತಿಳಿಯದೆ ಇರ ಲಿಲ್ಲ. 'ನಿಜಾಮ ಅವರ ಕಡೆ ಸೇರಿದರೆ ನಮ್ಮ ಕಥೆ ಮುಗಿಯಿತು' * ಎಂದು ಮದರಾಸು ಗವರ್ನರು ಹೈದರಾಬಾದು ರೆಸಿಡೆಂಟನಿಗೆ ಕೊಟ್ಟ ತಂತಿಯೇ ಆ ಮಾತಿಗೆ ಈಗಲೂ ಸಾಕ್ಷಿ ಕೊಡುತ್ತಿದೆ.

ಉತ್ತರದ ದಂಗೆಯ ಸೆಕೆ ದಕ್ಷಿಣದಲ್ಲೂ ತಗಲಿತು. ಮೀರತ್ತಿನಲ್ಲಿ ತಮ್ಮ ಅಣ್ಣ–ತಮ್ಮಂದಿರಿಗಾದ ಅವಸ್ಥೆಯನ್ನು ಕೇಳಿ ಹೈದರಾಬಾದಿನ ಮಹ-ಮ್ಮದೀಯರೂ ರೊಚ್ಚಿಗೆದ್ದರು. ದಂಗೆಯೇಳಿರೆಂಬ ಪ್ರಕಟನೆ ಮಸೀದಿ ಗೋಡೆಗಳ ಮೇಲೆ ಬಹಿರಂಗವಾಗಿ ಹಚ್ಚಲ್ಪಟ್ಟವು. ಫಕೀರರು ದಂಗೆಯ ಸಂದೇಶ ಸಾರುವ ಚಾರಣರಾದರು. ಚಾರ್‌ಮಿನಾರಿಗೆ ಅರಮನೆಯ ಗೋಡೆಗೇ ಪ್ರಕಟನೆ ಹಚ್ಚಿದರು. ಜನ ರೋಷಗೊಂಡು ರೆಸಿಡೆನ್ಸಿ ಕಚೇ ರಿಗೆ ನುಗ್ಗಿದರು. ಇಡೀ ಊರೇ ದೀನ್ ದೀನ್ ಎಂದು ಕೂಗುತ್ತಿತ್ತು. ಸಚಿವ ಇಂಗ್ಲಿಷರ ಪರ ಎಂದು ದಂಗೆಯ ಜನ ಅವನ ಜೀವಕ್ಕೆ ಅಪಾಯ ಬಯಸಿದರು. ಒಳ್ಳೆ ಮೊಹರಂ ಹಬ್ಬದ ಗಜಾಲು ಬೇರೆ. ಊರಿನ ಮೌಲ್ವಿ ಗಳು ನಿಜಾಮನ ಬಳಿಗೇ ಹೋಗಿ ದಂಗೆ ಮಾಡಬೇಕೆಂದು ಅವನಿಗೇ ಬೋಧಿ ಸಿದರು. ದೊರೆ ಹುಡುಗ; ಸುತ್ತಲಿನ ಜನ ಅಲ್ಪಮತಿಗಳು. ಈ ಸುಂಟರ ಗಾಳಿಯಲ್ಲಿ ಮಂತ್ರಿ ಒಂದೇ ಒಂದು ಕಿಡಿ ಹೊತ್ತಿಸಿದರೆ, ಹೊತ್ತಿಸಬೇಡ— ಹತ್ತಿದ ಉರಿ ಆರಿಸದಿದ್ದರೆ ಸಾಕಾಗಿತ್ತು. ಸರ್ವಾಪ್ರೋಶನ !

ಇಂಥ ಸಂದಿಗ್ಧ ಸಮಯದಲ್ಲಿ ಹಿರಿಯ ದೊರೆ ತೀರಿಕೊಂಡ. ಯುವ-ರಾಜನಿಗೆ ಪಟ್ಟ ಕಟ್ಟಬೇಕಾಯಿತು. ಆ ಸಂಭ್ರಮ ಮುಗಿಸಿ ತನ್ನ ಕಚೇರಿಗೆ ಬಂದಾಗ ಉತ್ತರ ದೇಶದಲ್ಲಿ ದಂಗೆಯಾಗಿದೆ—ಎಂದು ರೆಸಿಡೆಂಟನಿಗೆ ತಿಳಿ ಯಿತು. ಸಾಲಾರ ಜಂಗ್‌ನನ್ನು ಕರೆಸಿ ಸುದ್ದಿ ತಿಳಿಸಲಾಗಿ ಮೂರು ದಿನಕ್ಕೆ ಮುಂಚೆಯೇ ತನಗದು ಗೊತ್ತು ಎಂದು ಹೇಳಿದ ಸಚಿವೋತ್ತಮ. ಈ ಗುಲ್ಲು ಗಜಾಲಿನಲ್ಲೇ ಶಾಂತವಾಗಿ ಪಟ್ಟಾಭಿಷೇಕ ನಡೆದಿತ್ತು. ಬೇರೆಡೆ ಇಂಗ್ಲಿಷರನ್ನು ನಿರ್ದಯೆಯಿಂದ ಜನ ಕತ್ತರಿಸುತ್ತಿರಲು ಇಲ್ಲಿ ಹುಲಿಯ ದವಡೆ ಯಲ್ಲಿ ಕತ್ತಿಟ್ಟು ಸುರಕ್ಷಿತವಾಗಿ ಬಂದರು ಇವರು. ಇಷ್ಟೇ ಅಲ್ಲ; ದಂಗೆಯೆದ್ದ ಹಲಕೆಲವರನ್ನು ಸಚಿವ ಹಿಡಿತರಿಸಿ ಸುಡಿಸಿದ; ತಿರುಗಿಬಿದ್ದ ಸುರಪುರದ ರಾಜ

---

* If Nizam goes all is lost ?

ನನ್ನು ಹಿಡಿದು ಇಂಗ್ಲಿಷರಿಗೊಪ್ಪಿಸಿದ. ಸಾಲಾರ ಜಂಗ್ ಚಾಣಾಕ್ಷ, ದೂರದರ್ಶಿ. ಅವನ ರಾಜನೀತಿಯ ಕಣ್ಣಿಗೆ ಭವಿಷ್ಯ ಕಟ್ಟಿದಂತಿತ್ತು. ಇಂಗ್ಲಿಷರ ನೊಗಕ್ಕೆ ತನ್ನ ಕೊರಳು ಕೊಟ್ಟ. ಇದೆಲ್ಲ ನಡೆದಾಗ ಅವನು ಸಚಿವನಾಗಿ ನಾಲ್ಕು ವರ್ಷವಾಗಿತ್ತು. ೨೮ರ ಪ್ರಾಯ.

ಇಂಥ ಅತ್ಯಂತ ಕಠಿಣ ಪರಿಸ್ಥಿತಿ–ಒಳಗೂ ಹೊರಗೂ ಇದ್ದಾಗ ಮಂತ್ರಿತ್ವ ಮಾಡಿದುದು ಪ್ರಚಂಡ ಪ್ರತಿಭೆ, ಅಗಾಧ ಚಾತುರ್ಯ ಅಲ್ಲದೆ ಮತ್ತೇನು? ನಾಡಿನಲ್ಲಿ ಶಾಂತಿ ವ್ಯವಸ್ಥೆ, ಬೊಕ್ಕಸದಲ್ಲಿ ಹಣ, ಅನುಕೂಲರಾದ ಅರಸರು ಇದ್ದಿದ್ದರೆ ಸಾಲಾರ ಜಂಗ್‌ನ ಕೈವಾಡದ ಕೀರ್ತಿ ಜಗತ್ತಿಗೇ ಕಣ್ಣು ಕುಕ್ಕಿಸುತ್ತಿತ್ತು. ಮಂತ್ರಿ ಅಪ್ಪಾಜಿ, ಬೈಚಪ್ಪ ಮಂತ್ರಿ, ದಿವಾನ ರಂಗಾಚಾರ್ಲು, ರಾಜಾ ತೋಡರಮಲ್ಲರ ಸಾಲಿಗೆ ಸೇರಿದ್ದ ಸಚಿವ ಸಾಲಾರ ಜಂಗ್.

ಸಾಲಾರ ಜಂಗ್ ಯಾವ ಗುರುವಿನಲ್ಲೂ ವಿದ್ಯೆ ಕಲಿತವನಲ್ಲ. ಯಾರ ಬಳಿಯಲ್ಲೂ ತರಬೇತು ಪಡೆದವನಲ್ಲ. ಚಿಕ್ಕಂದಿನಲ್ಲಿ ತಂದೆ ತೀರಿದ್ದರಿಂದ 'ಅಜ್ಜಿ ಸಾಕಿದ ಮಗು.' ಆದರೆ ಈ ಮಗು ಎಲ್ಲ ಕಜ್ಜಕ್ಕೂ ಬಂತು. ಆಕೆ ಕಲಿಸಿದ ವಿದ್ಯೆ, ಜೊತೆಗೆ ಸ್ವಯಂಭೂ ಸಾಮರ್ಥ್ಯ. ಅಪಾರ ಅನುಭವದ ಸಮುದ್ರವೆ ಆದರೂ ಸಾಲಾರ ಜಂಗ್ ವಿನಯದ ಪುತ್ಥಳಿ. ಬಲು ಅಂದ ವಾದ ರೂಪು; ಒಂದು ದಿನವಾದರೂ ಅಲಂಕಾರ ಮಾಡಿಕೊಂಡವನಲ್ಲ. ತನ್ನ ಒಡೆಯ ತನಗೆ ಹಗೆಯಂತೆ ನಡೆದ; ತಾನು ಮಾತ್ರ ಒಡೆಯನಿಗೆ ಎರಡು ಬಗೆಯಲಿಲ್ಲ. ಸ್ವಾಮಿಕಾರ್ಯಕ್ಕೆ ಮಡಿಯಲೇಬೇಕೆಂಬ ಸತ್ಯವ್ರತಿ. ಗೆಳೆಯರು ಇದಿರು ತಿರುಗಿದರೂ ಕೇಡೆಣಿಸಬಾರದೆಂಬ ಅಖಂಡ ಶಾಂತಿ ಅವನದು. ಜನರಲ್ಲಿ ವಿಶ್ವಾಸ, ಆದರೆ, ಸತ್ಯವನ್ನು ಕಡೆದು ನೋಡುವ ದೂರ ದೃಷ್ಟಿ. ಕಷ್ಟಬಂದವರನ್ನು ಕಾಪಾಡುವ ಉಪಕಾರ ಬುದ್ಧಿ; ಎಷ್ಟೇ ಬಲವಂತ ವಾಗಿರಲಿ ದುಷ್ಟರನ್ನು ಬೇರು ಸಹಿತ ಕಿತ್ತುಹಾಕುವ ಹಟ–ಇವು ಸಾಲಾರ ಜಂಗ್‌ನ ಪ್ರಧಾನ ಗುಣ. ಬದುಕಿನಲ್ಲಿ ಬಹು ಸರಳ; ಸದಾ ಜನಹಿತದ ಚಿಂತೆ. ಬಡವರು ಬಲ್ಲಿದರೆಂಬ ಭೇದ ಅವನಿಗಿರಲಿಲ್ಲ. ದುಡಿತದಲ್ಲೋ ಎತ್ತಿದ ಕೈ. ನಸುಕಿನಿಂದ ನಡುರಾತ್ರಿಯ ತನಕ ಒಂದೇಸವನೆ ಕೆಲಸ.

ಸಿಪಾಯಿ ದಂಗೆಯಲ್ಲಿ ಇಂದ್ರನನ್ನೂ ತಕ್ಷಕನನ್ನೂ ಉಳಿಸಿ ,ಹೈದರಾ ಬಾದಿಗೊಂದು ರೂಪು ಕೊಟ್ಟು ಕಳೆ ತುಂಬಿದ ಮಹಾನುಭಾವ. ಆ ನಳ

ಪಾಯ ಭದ್ರಮಾಡಲು ಇಂಗ್ಲೆಂಡಿಗೆ ಪಯಣ ಬೆಳಸಿ ವ್ಹಿಕ್ಟೋರಿಯಾ ರಾಣಿಯ ಔತಣ ಉಂಡು ಬಂದ. ಪ್ರೋಪನ ಅತಿಥಿಯಾಗಿದ್ದ ರೋಂನಲ್ಲಿ. ಲಂಡನ್ ಯಾರಿಗೂ ಇಲ್ಲದ ಮರ್ಯಾದೆ ಮಾಡಿತು. ಆಕ್ಸಫರ್ಡ ಡಿ. ಸಿ. ಎಲ್. ಬಿರುದು ಕೊಟ್ಟಿತು, ಯಾವ ದೊರೆಗೂ ಆಗದಿದ್ದ ಮರ್ಯಾದೆ ಜರುಗಿತು. ಏನಾದರೇನು? ಸಾಲಾರ ಜಂಗ್ ಸಾಯುವಾಗ ೨೦ ಲಕ್ಷ ಸಾಲ ಸ್ವಂತಕ್ಕೆ. ದೊರೆಯ ಮರ್ಯಾದೆ, ದೇಶದ ಹಿತ ಸಚಿವನಿಗೆ ದೊಡ್ಡದಾಗಿತ್ತು. ಆದರಿಂದಿರು ಸ್ವಂತ ಸುಖ ದುಃಖ ಹೊಳೆಯುತ್ತಿರಲೇ ಇಲ್ಲ.



# ಮಾಡಪಾಟಿ ಹನುಮಂತರಾಯರು

ಶ್ರೀದೊಂದು ವಿಷಗಳಿಗೆ. ಹೈದರಾಬಾದಿನ ರಾಜಕೀಯ ರಂಗದ ಮೇಲೆ ಕಾರುಗತ್ತಲೆ ಕವಿದಿತ್ತು. ಪ್ರಜಾಪಕ್ಷದ ಚಳುವಳಿಯ ಮೇಲೆ ಸರಕಾರದ ಅಂಗಾರಕದೃಷ್ಟಿ ಬಿತ್ತು. ಮೊದಲೇ ಮೊಗಲಾಯಿ ಮಂದಿ, ಮೊದಲೇ ಅಂಜುಗುಳಿ ಜನ. ಈ ಗುಬ್ಬಿಗಳ ಮೇಲೆ 'ಗಸ್ತಿ ಕಿರ್ಪನ್' ಬ್ರಹ್ಮಾಸ್ತ್ರ ಎಂದೋ ಆಗಿತ್ತು. ಸಾಲದುದಕ್ಕೆ ಸುಗ್ರೀವಾಜ್ಞೆಯೊಂದು ಹೊರಟಿತು; ಸಭೆ ಸೇರಲು ರೂ. ೨೦೦೦ ಠೇವು ಇಡಬೇಕು, ಸಭೆ ಸರಕಾರದ ಮನಸ್ಸಿಗೆ ಬಾರದಿದ್ದರೆ ಠೇವು 'ಜಪ್ತು'. ನಾಡು ನಡುಗಿಹೋಯಿತು. ನಾಯಕರ ಕಣ್ಣಿಗೆ ಸಿಡಿಲು ಬಡಿಯಿತು.

ಕವಿದ ಕತ್ತಲೆ ಮೂರು ವರ್ಷ ಬೆಳಗಲಿಲ್ಲ. ಚಳುವಳಿಯ ಹುಳ ಅಲ್ಲಲ್ಲಿ ಹಾರಾಡಿ ಸೋತು ಸತ್ತುಹೋಯಿತು. ಬೆಳಕಿನ ಬಯಕೆಯನ್ನು ಹಿಂಗಿಸುವ ನಿರಾಶೆ ಅದು.

ಹರಾತ್ತಾಗಿ ಪತ್ರಿಕೆಗಳಲ್ಲಿ ಒಂದು ದಿನ ಓದಿದರು ಜನ, 'ಆಂಧ್ರ ಮಹಾಸಭೆಗೆ ಅಪ್ಪಣೆ, ಠೇವು ಇಲ್ಲ.' ನಾಡಿನ ಬೆರಳು ಮೂಗಿನ ಮೇಲೇರಿತು. ಈ ಅಮಾಸೆಯ ಚಂದ್ರ ನಂಬುವುದೇ ಬಿಗಿಯಾಯಿತು.

ಶ್ರೀ. ಹನುಮಂತರಾಯರ ಉಡದ ಹಿಡಿತಕ್ಕೆ ಆ ಕೀರ್ತಿ; ಅವರ ಕಾರ್ಯಸಾಧನಾದೀಕ್ಷೆಯ ಫಲ ಅದು. ಆ ನಿರಂತರ ಧಾರಾಪ್ರವಾಹಕ್ಕೆ ಬರಿ ಕಲ್ಲಿನ ಬೆಟ್ಟವೂ ಹುಡಿಹುಡಿ. ನಿಜಾಮದೇಶದ ರಾಜಕೀಯ ಪ್ರಲಯದಲ್ಲಿ ರಾಯರು ಆಂಧ್ರ ಮಹಾಸಭೆಯ ವ್ಯವಹಾರವನ್ನು ತಮ್ಮ ಕಡೆ ತೆಗೆದು ಕೊಂಡಿದ್ದರೆ ಮೊಗಲಾಯಿಯಲ್ಲಿ ಒಂದು ಬಗೆಯ ಜೀವದಾನ, ಪುನಸ್ಸೃಷ್ಟಿ.

ಮೊಗಲಾಯಿಯಲ್ಲಿ ರಾಯರ ಗುರುತು ಯಾರಿಗಿಲ್ಲ? ಈ ರಾಜ್ಯದಲ್ಲಿ ಆಂಧ್ರೋದ್ಯಮವನ್ನು ಬಿತ್ತಿದ 'ಪಿತಾಮಹ'ರು ಅವರು. ಮೂವತ್ತು ವರ್ಷಗಳ ಮಹಾಸಾಧನೆ ಅದು. ಅಂದು ಸಾಹಿತ್ಯ, ಗ್ರಂಥಾಲಯುಗಳ ಭಾವಿ ಕೊಳಗಳಲ್ಲಿ ಮೊದಲಾದ ಅವರ ಸೇವೆ ಇಂದು ಆಂಧ್ರರ ಸರ್ವತೋಮುಖಾಭಿವೃದ್ಧಿಯ ಸಾಗರದಲ್ಲಿ ಬೀಸಾಗಿ ಈಸಹತ್ತಿದೆ. ೧೨೧ ವರ್ಷದ ಹಿಂದೆ

ಆಂಧ್ರರ ಚಳುವಳಿಯ ಗಟ್ಟಿ ಬೀಜದ ಬಿತ್ತನೆಯಾಯಿತು. ಅಂದಿನಿಂದ ಇಂದಿನವರೆಗೆ ಅದರ ಚಳುವಳಿಯ ಸೂತ್ರಗಳು ಇವರ ಕಡೆಗೇ. ಈಗಲೂ ಇವರ ಕೈಯಲ್ಲೇ ಇವೆ. ಪ್ರಾರಂಭದ ದಿನಗಳಲ್ಲಿ ರಾಯರ ವಿನಾ ಕೆಲಸಗಾರರೆ ಇಲ್ಲ. ಸಭೆ ನೆರೆಸಿದರೆ ಆಮಂತ್ರಣಪತ್ರಕ್ಕೆ ವಿಳಾಸ ತಾವೇ ಬರೆಯಬೇಕು. ತಿಕೇಟು ಹಚ್ಚುವುದು, ವರ್ತಮಾನಪತ್ರಕ್ಕೆ ಬರೆದುಕೊಡುವುದು ಎಲ್ಲಾ ಅವರ ಪಾಲಿಗೆ. 'ಅಭಿಮಾನಹೀನ—ವಿವೇಕಶೂನ್ಯ' ಎಂದು ಪ್ರಭುತ್ವದ ಅಧಿಕಾರಿಗಳು ನಾಡಿನ ಆಂಧ್ರರನ್ನು ಹಳಿದಿದ್ದರು; ಅದೇ ಜನ ಇಂದು ನಾಡಪೂಜೆಗೆ ಮೊದಲೆಡೆ ಸಲಿಸುತಿದಾರೆ. ಭೇರಿ ಬಾರಿಸಿದ ಕೈ ಸೋತುಬಿದ್ದಿವೆ. ಕಹಳೆ ಊದಿದ ತುಟಿ ಬಿರಿಯದಿವೆ; ಹಿಂದಿದ್ದ ಹುಲುಪದಾತಿಗಳ ಹಲ್ಲೆಯು ಇದು.

ಮೊದಲ ಓಟದಲ್ಲಿ ರಾಯರಿಗೆ ನಂಬುಗೆ ಇಲ್ಲ; ಅವರದು ಆಮೆಯ ನಡುಗೆ. ರಾಯರ ರಥ ಯಾವಾಗಲೂ ಎಡಬದಿಗೇ. ಎಂದೂ ಸಂಗಡ ಬರುವ ಗಾಡಿಗೆ ಅಡ್ಡವಾಗಿ ದೂಡುವುದಿಲ್ಲ. ಒಮ್ಮೊಮ್ಮೆ ತಮ್ಮ ಕುದುರೆಯ ಕಡಿವಾಣ ಬಿಗಿಹಿಡಿದು ಹಿಂದಿನ ಗಾಡಿಗೆ ಕೈಬೀಸಲೂಬಹುದು—ಮುಂದುವರಿಯಲು ಅವರಿಗೆ ಗೊತ್ತಿದೆ. ಸಾರ್ವಜನಿಕ ಜೀವನ, ಲೋಕಸಂಗ್ರಹದ ಕಾರ್ಯ ಕಡಿದಾದ ಜಾರಿಕೆ. ಅಲ್ಲಿ ವೇಗವಾಗಿ ಓಡಿದಷ್ಟೂ ಕೆಟ್ಟದ್ದು. ಗಾಡಿಯೂ ಮುರಿದು ಸಾರಥಿಯೂ ಕೊಳ್ಳಕ್ಕೆ ಬೀಳುವ ಸಂಭವ ಬಹಳ. ಮೊಲದಂತೆ ಓಡಿ ಬಲೆಗೆ ಬೀಳದೆ ಆಮೆಯಂತೆ ನಡೆದು ನೆಡಬೇಕು ಗೆಲವಿನ ಬಾವುಟ. ಅಂತೇ ರಾಯರು ಸಾವಧಾನದ ಮೂರ್ತಿ. ಮೆಲುಮೆಲನೆ ನಡೆವ ಅವರಿವರನ್ನು ಸರಿಸಿ, ಮುಂದೆ ಬಂದು ಕೂಡುವ ಆಸೆಯಿಲ್ಲ. ಹಿಂದೆ ಇದ್ದು ಕಿಡಿ ಹೊತ್ತಿಸುವುದರಲ್ಲೇ ಸಮಾಧಾನ. ಆರು ವರುಷ ಆಂಧ್ರ ಸಭೆಯ ಅಧ್ಯಕ್ಷಪದವಿ ಇವರನ್ನು ವರಿಸಿ ವರಿಸಿ ಸೋಲಿಗೆ ಶರಣು ಹೋಯಿತು. ಕಡೆಗೂ ಅಧ್ಯಕ್ಷರಾದಾಗ ಕುರಿ ಕೋಣ ಬಿದ್ದವು. ಬೇರೆ ಹಾದಿ ಇರದೆ 'ಹೂಂ' ಅಂದರು. ಅಂದದ್ದೇ ತಡ, ಕೈ ಹಿಸುಕಿಕೊಳ್ಳುವುದು ಮೊದಲಾಯಿತು. ಇನ್ನೂ ಅದೇನು ತಪ್ಪಿಲ್ಲ.

ಆದರ್ಶದ ಕಾವಿದೆ, ಉತ್ಸಾಹದ ಬೆಂಕಿಯಿಲ್ಲ. ಕಣ್ಣಿಗೆ ಗುರಿ ಕಟ್ಟಿದೆ, ಕಾಲಿಗೆ ವೇಗ ಗೊತ್ತಿಲ್ಲ. ತೂಕ ಮಾಡದೆ ಯಾವ ಕೆಲಸಕ್ಕೂ ರಾಯರು ಕೈಹಾಕುವಂತಿಲ್ಲ. ಕಾಲು ಚಾಚುವ ಮೊದಲು ಹಾಸಿಗೆ ಅಳೆಯುವ ವ್ಯಾನ

ಹಾರಿಕ ವಿವೇಕ ಪೂರಾ ಇದೆ. ಹಿಡಿದ ಕೆಲಸ ಹಣ್ಣಾಗುವವರೆಗೆ ಆ ಕೆಲಸ ಏನೆಂಬದು ಹೆಂಡತಿಗೂ ತಿಳಿಯುವುದಿಲ್ಲ. ಸರಕಾರದಲ್ಲಿ ಮಾಡುವುದುಂಟು: ನೌಕರಿಗೆ ತಮಗೆ ಬೇಕಾದವರನ್ನು ನೇಮಿಸಿ, ಅನಂತರ ಗೆಜೆಟ್ಟಿನಲ್ಲಿ ಅದಕ್ಕಾಗಿ ಪ್ರಕಟಿಸುವುದು. ಹಾಗೆ ಇವರ ಕೆಲಸ. ಕೆಲಸ ಆದಮೇಲೆ ಅದರ ಮಾತು. ಆಗದ ಕೆಲಸ ಅಜ್ಞಾತ ಚರಿತ್ರದಲ್ಲೇ ಮುಳುಗಿ ಹೋಗಬೇಕು. ಈ ಮೌನ, ಈ ಗೋಪನ, ಹಂಚಿಕೆ ಪ್ರಭುತ್ವಕ್ಕೆ ಹಿಡಿತ ಸಿಗದ ಕುಸ್ತಿ. ಅನುಭವವಿಲ್ಲದ ಹರೆಯಕ್ಕೆ ಅರ್ಥವಾಗದ ಸಮಸ್ಯೆ.

ಇವರ ಮನೆಯ ಹೆಸರು 'ಆಂಧ್ರಕುಟೀರ'; ಆಂಧ್ರ ಚಳುವಳಿಯ 'ಆನಂದಭವನ' ಅದು. ಆ ಭವನದ ಪುಣ್ಯ, ಈ ಕುಟೀರದ ಪಾಲಿಗೆ ಕಟ್ಟಿಟ್ಟಂತಿದೆ. ಆಂಧ್ರನಾಯಕರೆಲ್ಲರ ಪಾದಧೂಳಿಯಿಂದ ಪುನೀತವಾಗಿದೆ ಇದು. ಆಂಧ್ರಪ್ರಜೆಯ ಸ್ವಾಭಿಮಾನದ ಮಂತ್ರಘೋಷದಿಂದ ಪವಿತ್ರವಾಗಿದೆ. ಸಾಹಿತ್ಯ, ರಾಜಕೀಯ, ವ್ಯಾವಹಾರಿಕ, ಶೈಕ್ಷಣಿಕ—ಎಲ್ಲ ಆಂಧ್ರೋದ್ಯಮಗಳಿಗೂ ಇದು ಕೇಂದ್ರ. ಆದರೂ ಆ ಮನೆಯ ಗಾಳಿಯಲ್ಲಿ ಆಂಧ್ರರ ವೇಗವಿಲ್ಲ. ಆ ಸಮಾರಂಭವಿಲ್ಲ, ಆ ವೈಮರವು ಇಲ್ಲ. ಹೇಗೋ ಏನೋ ರಾಯರಲ್ಲಿ ಮಹಾರಾಷ್ಟ್ರರ ಮಿತವ್ಯಯ ನಿರ್ಮಮತೆಗಳು, ವ್ಯಾವಹಾರಿಕ ಜಾಣತನ, ಚದುರಂಗದ ಚತುರತೆಗಳು ಬಂದು ಸೇರಿವೆ. ರಾಯರು ಎಳೆತನದಲ್ಲಿ ಮಹಾರಾಷ್ಟ್ರದ ಮನೆಯೊಂದರಲ್ಲಿ ಕೆಲಕಾಲ ಕಳೆದಿದ್ದರಂತೆ. ಮೆಕಾಲೆ ಸಾಹೇಬನ ಜಾಳಿಗೆಯಲ್ಲಿ ಸಿಕ್ಕು ಮುನಷಿತನದ ಕನ್ನಡಕ ಮೂಗಿನ ಮೇಲೇರಿಸಿದ್ದುದೂ ಒಂದು ಕಾರಣವಿರಬೇಕು. ಆ ಯಂತ್ರವೇ ಅಂಥದು. ರಸಜೀವನ, ಭಾವದರ್ಶನಗಳು ಆ ಹಾದಿಯ ಮೇಲೆ ಹಾಯುವುದಿಲ್ಲ. ಮಾನವಸಮಾಜದ ದೌರ್ಬಲ್ಯ ತಪ್ಪುತಡೆ ಅಲ್ಲಿ ಸುಳಿಯುವುದಿಲ್ಲ. ಎಲ್ಲಾ ಅಸಿಧಾರೆ, ಅಚಲ ನಿಯಮ.

ರಾಯರ ಕಚೇರಿಕೋಣೆಯಲ್ಲಿ ಕುಳಿತು ತರ್ಕಿಸಿಕೊಂಡಿದ್ದೇನೆ ಅನೇಕ ಸಲ; ಅಚ್ಚರಿಗೊಂಡಿದ್ದೇನೆ. ಇದ್ದ ಎರಡು ಕಿಡಿಕಿಯಲ್ಲಿ ಒಂದು ಸದಾ ಮುಚ್ಚಿರುತ್ತದೆ. ಛಾವಣಿಯೂ ಎತ್ತರವಿಲ್ಲ. ಇಷ್ಟಾದರೂ ಒಂದು ಫ್ಯಾನು ಇಲ್ಲ. ಗೋಡೆಗೆ ಕ್ಯಾಲೆಂಡರ್ ಬಿಟ್ಟರೆ ಬೇರೆ ಯಾವ ಚಿತ್ರವೂ ಇಲ್ಲ. ಕಣ್ಣಿಗೆ ಕಾಣುವುದೆಲ್ಲ ಬರೀ ಕಡತದ ಗುಂಪು, ಒಂದರಮೇಲೊಂದು ಸೇರಿದ್ದು.

೧೨ ವರ್ಷದ ಮೇಲೆ ಸರಕಾರದ ಕಾಗದಪತ್ರಗಳನ್ನು ಸುಟ್ಟುಹಾಕುತ್ತಾರಂತೆ, ಕಚೇರಿಗಳಲ್ಲಿ. ರಾಯರ ಮನೆಯಲ್ಲಿ ೩೦ ವರ್ಷದ ಸಣ್ಣಪುಟ್ಟ ಸಂಗತಿಗಳ ಕಾಗದಪತ್ರಗಳೂ ಭದ್ರವಾಗಿ ಕಾದಿಡಲ್ಪಟ್ಟಿವೆ.

ಈ ಕೋಣೆಯೇ ರಾಯರಿಗೆ ದಿನಕ್ಕೆ ೧೨ ಗಂಟೆ ವಾಸಸ್ಥಳ. ಊಟ ನಿದ್ರೆಗೆ ಮಾತ್ರ ಒಳಗೆ. ಗೆಳೆಯರು, ಬಳಗ, ಕೆಲಸಗಾರರು, ಅಪರಿಚಿತರು ಯಾರೇ ಬರಲಿ ಇದೇ ಅವರ ರಂಗಸ್ಥಲ. ಆ ಮೇಜು ಕುರ್ಚಿಗಳ ಸಾಕ್ಷಿಯಿಲ್ಲದೆ ಯಾರ ಪರಿಚಯಗ್ರಹಣವೂ ಆಗಿಲ್ಲ ರಾಯರಿಗೆ. ಮನೆಮಾತು ಏನಾದರೂ ಅಷ್ಟು ಮುಖ್ಯವಿದ್ದರೆ, ಕೋಣೆಯಲ್ಲಿ ಹೊರಗಿನವರು ಇಲ್ಲದ್ದು ನೋಡಿಬಂದು ಮಾತಾಡಿ ಹೋಗಬೇಕು ಹೆಂಡತಿ. ಹರಟೆಯ ಹುಡಿಯಲ್ಲಿ ರಾಯರು ಆಡಿಲ್ಲ; ಭಾವನೆಯ ಬಯಲಲ್ಲಿ ಯಾರಿಗೂ ರಾಯರ ಭೆಟ್ಟಿಯಾಗಿಲ್ಲ. ಹೆಂಡತಿಗೆ ತಾವೇ ಪಾಠ ಹೇಳಿ ವಿದ್ಯಾವತಿಯಾಗಿ ಮಾಡಿದರು ಈ ವಯಸ್ಸಿನಲ್ಲಿ. ಅದರ ಕಾರಣ, ತಾವು ಹೂಡಿದ ಸಾಲೆಗೆ--ಹೆಣ್ಣುಮಕ್ಕಳು—ಉಪಾಧ್ಯಾಯಿನಿಯರು ಬರಬೇಕೆಂದು ಉದ್ದೇಶ.

ಎಲ್ಲ ಜನರಿಗೂ ಎರಡು ಲೋಕ. ಒಂದು ಸಾದಾ, ಸಾಮಾನ್ಯ ಜನರದು—ಇನ್ನೊಂದು ಆಪ್ತಲೋಕ, ಅಂತರಂಗದ್ದು. ಗಾಢೋದ್ರೇಕದ ಹೊತ್ತಿನಲ್ಲಿ, ಆತ್ಮಕ್ರಾಂತಿಯ ನಿರಭಿಮಾನದ ನಿಮಿಷದಲ್ಲಿ ಎರಡನೆಯ ಲೋಕಕ್ಕೆ ಜಾರುತ್ತಾರೆ ಜನ. ರಾಯರಿಗೆ ಈ ಲೋಕ ಲೋಪ. ಅದರ ತಲೆಯ ಮೇಲೆ ಪ್ರಜಾಸೇವೆಯ ಗುಡ್ಡ ಹೊರಿಸಿ ಆಳವಾಗಿ ಮುಳುಗಿಸಿದ್ದಾರೆ.

ಹೀಗಾಗಿ ರಾಯರು ಬ್ಲಾಳಿನಲ್ಲಿ ಏಕಾಕಿ ಸಿಂಹ. ನಾಲ್ಕೂ ಜನರ ನಡುವೆ ಒಂಟಿಗರು. ಸುತ್ತಲೂ ನಾಲ್ಕು ಮೈಲದವರೆಗೆ 'ಶಾಮುನಗೆರ್ರಿ' ಕೆಲಸಗಾರರನ್ನು ಹತ್ತಿರ ಕರೆದು, ಮೈದಡವಿ, ಹೆಗಲಮೇಲೆ ಕೈಹಾಕಿ, ಕೇಮಕ್ಷ ಯೋಗಕ್ಷೇಮದ ಮಾತನ್ನು ರಾಯರು ಆಡುವ ನೋಟ ದಿನಾ ಕಣ್ಣಿಗೆ ಬೀಳುತ್ತದೆ. ಅದರ ಮಂತ್ರಶಕ್ತಿ ರಾಯರ ದೊಡ್ಡ ಊರೆಗೋಲು. ಆದರೆ ಅವರಲ್ಲಿ ಈ ರೀತಿ ಸಲಿಗೆ ತೋರಿದವರು ಯಾರೂ ಇಲ್ಲ. ಒಬ್ಬಿಬ್ಬರಿಗೆ ರಾಯರೊಡನೆ ಏಕವಚನದ ವ್ಯವಹಾರವಿದೆ; ಆದರೆ ಅದು ಬರೀ ವಚನ ವ್ಯವಹಾರ. ಹೀಗಿದ್ದರೂ ಒಮ್ಮೊಮ್ಮೆ ಭಾವನೆ ಉಕ್ಕಿಬರುತ್ತದೆ; ತರುಣ ಕಾರ್ಯಕರ್ತನಿಗೊಬ್ಬಗೆ—ಆ ಭಾಗ್ಯ ಅವನದೇ—ಮೂರು ವರ್ಷ ಕೂಡಿ

ಕೆಲಸ ಮಾಡಿದಮೇಲೆ ಮನೆಯೊಳಗೆ ಚಹಾ ಕೊಟ್ಟರು. ಅದೊಂದು ಕಟ್ಟು ಕತೆ ಈಗ ಊರಲ್ಲಿ, ಈ ಏಕಾಂತ ಪಙ್ಕ್ತಿಲಾಭದ ಸಂಗತಿ. ರಾಯರು ಎಲ್ಲ ಜನರಿಗೂ ಬೇಕಾದವರು ನಿಜ. ಇವರಿಗೆ ಬೇಕಾದ ಜನ ಮಾತ್ರ ಯಾರೂ ಇಲ್ಲ; ಅಥವಾ ಎಲ್ಲರೂ ಹೌದು. ಲೋಕಸೇವೆಯ ಹೋಮದಲ್ಲಿ ರಾಯರ ಅಭಿಮಾನ ಮಮತೆಗಳೇ ಸಮಿತ್ತು.

ಇದೇ, ರಾಯರ ಹಿರಿತನದ ಗುಣ; ಅದೇ ಲೋಪ.

ಹೆರರ ಹಿಗ್ಗಿನಲ್ಲಿ ಹಿಗ್ಗುವುದು ಅವರ ಹುಟ್ಟುಗುಣ. ಸಾರ್ವಜನಿಕ ರಂಗದಲ್ಲಿ ಇವರು ಮೊಂಡಬಾಲದ ನರಿ. ಎಲ್ಲರ ಕೈಯೂ ಈ ಬೆಂಕಿಯಲ್ಲಿ ಸುಡಲಿ ಎಂಬ ಸದಿಚ್ಛೆ. ಮುಂದಾಳುತನ ಬಹಳ ಜನರಿಗೆ ಅಖಂಡನಿಧಿ. ನಾಗರದಂತೆ ಕಾಯಬೇಕು. ರಾಯರ ಸ್ವಭಾವದ ನೀರಿಗದು ಬೆಂಕಿಯ ಹಾಗೆ. ಆಂಧ್ರಮಹಾಸಭೆ ಮೊದಲು ಜೋಶೀ ಪೇಟೆಯಲ್ಲಿ ನೆರೆ-ದಾಗ ಅಧ್ಯಕ್ಷಪದವಿ ಇವರ ಕಾಲಲ್ಲಿ ಬಿದ್ದು ಹೊರಳಾಡಿತು. ಇವರ ಮನಸು ಅಷ್ಟು ಕಿರಿದಿರಲಿಲ್ಲ. ಮುಂದೆ ಪ್ರಸಿದ್ಧಿಗೆ ಬರಲಿದ್ದ ತರುಣ ಪ್ರತಾಪರೆಡ್ಡಿಯನ್ನು ಬಯಲಿಗೆಳೆದರು. ಈಗಲೂ ಅದೇ ಹಾಡು. ಸಾರ್ವ-ಜನಿಕ ಜೀವನದಲ್ಲಿ ಕರ್ತೃತ್ವಶಾಲಿತನದ ಬಗ್ಗೆ ಇವರದು ಹದ್ದಿನ ಕಣ್ಣು. ಸಾಸಿವೆಯ ಕಾಳಿನಷ್ಟೇ ಆದರೂ ಆ ಗುಣ ಇವರ ಕಣ್ಣಿಗೆ ಕಾಣದಿರದು. ಮೊಗಲಾಯಿ ಆಂಧ್ರರಲ್ಲಿ ಹತ್ತೆಂಟು ಜನ ಹೆಸರಾದ, ಆಗಲಿರುವ ಕೆಲಸಗಾರ ರಿದ್ದಾರೆ. ದ್ರಾವಿಡರು ಆರಂಭಶೂರರು, ಬರೀ ಬೊಗಳೆಯ ಕೆಂಚರು, ಗಟ್ಟಿ ಕೆಲಸ ಮಾಡಿ ಅರಿತಿಲ್ಲ—ಎಂಬ ಮಾತು ಸುಳ್ಳಾಗಿದೆ. ಇದಕ್ಕೆ ಆ ಹದ್ದಿನ ಕಣ್ಣು, ನಿರಭಿಮಾನಗಳೇ ಕಾರಣ. ಹಿರಿಯರನ್ನು ಮುದಿಹದ್ದು ಎನ್ನುವುದು ಹರೆಯದ ರೂಢಿ. ಹಿರಿಯರೆಲ್ಲ ಇವರಂಥ 'ಹದ್ದು'ಗಳೇ ಆದರೆ, ಅಣಕವೂ ಅನ್ವರ್ಥಕವೇ.

ರಾಯರ ಮಾತಿನಲ್ಲಿ ಆವೇಶವಿಲ್ಲ; ನಿರ್ಧಾರವಿದೆ. ಹೃದಯಕ್ಕೆ ಅದ ರಿಂದ ಹುರುಪು ಕಾವುಗಳು ಸಿಗದಿದ್ದರೂ ಮನಸಿಗೆ ನಂಬುಗೆ ಹುಟ್ಟುತ್ತದೆ. ಇವರ ವ್ಯಾಖ್ಯಾನದಲ್ಲಿ ನೋಟ ಮೇಲಿದ್ದರೂ ನುಡಿ ರೆಕ್ಕೆಗೊಂಡು ಏರು ವುದಿಲ್ಲ, ನೆಲದ ಹುಳುವಿನಂತೆ ಅಲ್ಲೇ ಸುತ್ತಾಡುತ್ತದೆ. ಬಲವಿದೆ, ಗೆಲವಿದೆ: ಆದರೆ ಓಟವಿಲ್ಲ, ಬೇಟವಿಲ್ಲ ಭಾವನೆಯಲ್ಲಿ. ತುಂಬಿದ ಕೆರೆ ರಾಯರು.

ಜಿನುಗಾಗೇ ಆದರೂ ಹರಿಯುವ ತೊರೆಯಲ್ಲ. ಆಯ್ದು ಹೆಕ್ಕಿದ ಅಭಿಪ್ರಾಯ ಗಳು. 'ಪಲವುಂ ಪಳ್ಳ ಸಮುದ್ರ' ಇವರು. ಸಂಸರ್ಗಜನ್ಯರಾದ ಕಾರಣ, ಸಂಪ್ರದಾಯಸಿದ್ಧ ನೀತಿ. ಅಂತೇ ರಾಯರ ಸಂವಾದದಲ್ಲಿ ವಾದವಿಲ್ಲ, ಎಲ್ಲಾ ತೀರ್ಪುಗಳೇ. ವೃತ್ತಿಯ ಹಾದಿ ತುಳಿದಿದ್ದರೆ ಮೇಲ್ತರಗತಿಯ ನ್ಯಾಯಾಧೀಶ ರಾಗಬಹುದಾಗಿತ್ತು. ಈಗ ಕೆಳತರಗತಿಯ ವಕೀಲರು. ೧೫ ವರ್ಷಗಳ ಹಿಂದೆ ಲೋಕಸೇವೆಯ ಮಾಯೆಗೆ ಸಿಕ್ಕು ತಮ್ಮ ಸರಕಾರಿ ನೌಕರಿ ಬಿಡದೆ ಇದ್ದರೆ ಪ್ರಭುತ್ವದ ಪರದೆಯ ಹಿಂದೆ ದೊಡ್ಡ ಮುತ್ಸದ್ದಿಯಾಗಬಹುದಾಗಿತ್ತು. ಏಕೋ—ಹೇಗೋ ಆ ಹಾದಿ ತಪ್ಪಿತು. ಆಂಧ್ರರ ಪುಣ್ಯ.

ಕೇವಲ ಹುರುಪಿನ ಹರೆಯಕ್ಕೆ ಮೀರಿದ ಒಂದು ವಿಶಿಷ್ಟ ಶಕ್ತಿ ಇವರಲ್ಲಿದೆ ಆ ಗಾಂಭೀರ್ಯ, ಆತ್ಮಾಭಿಮಾನಗಳು ಅವರದೇ ಸರಿ. ರಾಯರದು ತುಂಬಿದ ಕೊಡದ ಜಾತಿ. ಅವರು ತುಳುಕಿದುದನ್ನು ಯಾರು ನೋಡಿದುದೂ ಒಂದೇ ಸಲ. ಹರೆಯದವರು ಆಂಧ್ರಮಹಾಸಭೆಯ ಮೂಲೋದ್ದೇಶಗಳಿಗೆ ಕೊಡಲಿ ಎತ್ತಿದಾಗ, ತಾವು ತೇಲಿಸಿಕೊಂಡು ಬಂದ ನಾವೆಯನ್ನು ಏನೂ ಹೊಣೆ ಯಿಲ್ಲದ ಅನಧಿಕಾರಿಗಳು ಇದಿರುಹುಟ್ಟು ಹೊಡೆದಾಗ, ಅವರಿಂದ ನೋಡು ವುದಾಗಲಿಲ್ಲ. ಬಡವಾದ ತುಫಾನಾಗಿಬಿಟ್ಟರು.

ಇವರ ಮನೆ ನೆರೆಯವರದಕ್ಕಿಂತ ಸ್ವಲ್ಪ ಎತ್ತರದಮೇಲಿದೆ. ಇವರ ಬುದ್ಧಿಯ ಓಲಾಟವೂ ಅಷ್ಟೆ. ಹೃದಯದ ಸರೋವರದಲ್ಲೆಳೆಯದೆ ಮೇಲ್ಮೆ ಟ್ಟಲಿನಿಂದಲೇ ಕೆಳಗೆ ನೋಡುತ್ತಾರೆ ಜಗದ ಕಡೆಗೆ. ಎಲ್ಲಾ ಸ್ಪಷ್ಟವಾಗಿ ಮೂಡುತ್ತದೆ. ಏನೂ ಗೊಂದಲವಾಗುವುದಿಲ್ಲ. ಜಗದ ಎಲ್ಲ ಮಾತು, ಸಮಸ್ಯೆಗಳ ಬಗ್ಗೆ ಇವರಿಗೆ ನಿಶ್ಚಿತಾಭಿಪ್ರಾಯವಿದೆ. ಯಾವುದರ ಬಗ್ಗೆ-ಯಾದರೂ ಅಷ್ಟು ನಿರ್ಧಾರ ಕಾಣದಿದ್ದರೆ ಆ ಮಾತು ಪ್ರಶ್ನೆ ಇವರ ಮಂಡ-ಲದ ಹೊರಗಿನದು. ಅದು ಇವರಿಗೆ ಇಲ್ಲ— 'ಅಸತ್'. ಜಗದಲ್ಲಿ ಇಂಥವ ರದೊಂದು ಗುಂಪು. ಅವರ ಮನಸ್ಸಿಗೆ ಒಂದು ಊರೆಗೋಲು ಬೇಕು. ಸಂಶಯದ ತೊಳಲಾಟದ ಆವಿದ್ಧತೆಗೆ ಅವರ ಬಾಳಿನಲ್ಲಿ ಇಂಬು ಇಲ್ಲ.

ಹಾಗೆಯೇ ಇವರ ಬಗ್ಗೆಯೂ ಯಾರಿಗೂ ಸಂಶಯವಿಲ್ಲ. ಅಗ್ನಿ ಪ್ರವೇಶಮಾಡಿದ ಸೀತೆಯಂತೆ; ಸೀಜರನ ಸತಿಯಂತೆ. ಜಗತ್ತು ಇವರಿಗೆ ತೋರಬಹುದಾದ ಯಾವ ಲಾಭವೂ ಇಲ್ಲ. ಆಂಧ್ರ ಸಭೆಗೆ ರಾಯರು

ಅಧ್ಯಕ್ಷರಾದಾಗ ಪ್ರೋಲೀಸರು ಸಭೆಗೆ ತಾವು ಹೋಗುವ ಅಗತ್ಯವೇ ಇಲ್ಲೆಂದು ತಿಳಿದಿದ್ದರು. ಅಷ್ಟು ನಂಬಿಗೆ. ಲೆಕ್ಕವಿಡುವುದರಲ್ಲಂತೂ ಚಿತ್ರಗುಪ್ತನ ಅವತಾರ. ಅವರ ಕೋಣೆಯಲ್ಲಿ ಕಡತ–ಕಡತಗಳಾಗಿರುವ ಲೆಕ್ಕಪತ್ರಗಳೂ ಕಾಗದಗಳೂ ಅದಕ್ಕೆ ಸಾಕ್ಷಿ.

ರಾಯರಿಗೆ ಸಂತಾನವಿಲ್ಲ. ಸಂಸಾರದ ಚಿಂತೆಯೂ ಇಲ್ಲ. ಅವರ ಸ್ವಭಾವಕ್ಕೆ ಅದು ಒಗ್ಗುವುದೂ ಇಲ್ಲ. ಅದೊಂದು ಅವರು ಪಡೆದು ಬಂದ ಪುಣ್ಯ.

ರಾಯರು ಹುಟ್ಟಿದಾಗ ಯಾವ ದೇವರೂ ಹರಸಲಿಲ್ಲ. ಹತ್ತು ಜನರ ಮುಂದಾಳಾಗುವ ಯೋಗ ಇವರ ಹುಟ್ಟಿನಲ್ಲಿ ಇರಲಿಲ್ಲ; ಹಣೆಯಲ್ಲಿ ಕಂಡಿರಲಿಲ್ಲ. ಆದರೂ ಅಚಲ ಕರ್ಮನಿಷ್ಠೆ, ಅಸಿಧಾರಾವ್ರತದ ಕರ್ತವ್ಯತತ್ಪರತೆ, ಅಪಾರ ದೇಶಪ್ರೇಮಗಳು ಶ್ರೇಷ್ಠ ಜೀವನದ ಬಿತ್ತು ಬಿತ್ತಿದವು.

---

# ಮಹದೇವ ದೇಸಾಯಿ

## ೧ *

ಮಹದೇವ ದೇಸಾಯರ ಪರಿಚಯವಿಲ್ಲದ ವರ್ಧಾಯಾತ್ರೆ ಕರ್ಪೂರವಿಲ್ಲದ ಆರತಿಯಂತೆ. ಅವರ ಜೀವನ ಗಾಂಧೀಜಿಯೊಂದಿಗೆ ಅಷ್ಟು ಬೆರೆತು ಹೋಗಿದೆ. ಗಾಂಧೀಜೀ ರಾಮನಾದರೆ ಮಹದೇವ ದೇಸಾಯಿ ಲಕ್ಷ್ಮಣ. ಭಾವ-ರೂಪಗಳಿದ್ದಂತೆ, ವಸ್ತು-ಛಾಯೆಗಳಿದ್ದಂತೆ ಅವರ ಸಂಬಂಧ.

ಗಾಂಧೀಜೀ ಇದ್ದಲ್ಲಿ ಮಹದೇವ ದೇಸಾಯಿ ಇದಾರೆಯೋ ಎಂದು ಹುಡುಕುವ ಅಗತ್ಯವಿಲ್ಲ. ಸದಾ ಅವರ ಹಿನ್ನೆಲೆಯಲ್ಲಿ ಅವರ ನೈಯಂತೆ ಚಲಿಸುತ್ತಾರೆ. ಪರ್ಣಕುಟಿಯಲ್ಲಾಗಲಿ ಪ್ರವಾಸದಲ್ಲಾಗಲಿ, ಸಂಭಾಷಣೆಗಳಲ್ಲಾಗಲಿ ಸಭಾ ಮಧ್ಯದಲ್ಲಾಗಲಿ ಗಾಂಧೀಜಿಯ ಮೇಲೆ ನೆಟ್ಟ ಕಣ್ಣು, ಕೈಯಲ್ಲಿ ಲೇಖನಿ, ಕಾಗದ– ಹೀಗೊಂದು ಮೂರ್ತಿ ಕಾಣಬರುತ್ತದೆ. ಅವರೇ ಮಹದೇವ ದೇಸಾಯಿ; ಗಾಂಧೀಜಿಯ ಪಟ್ಟಶಿಷ್ಯ.

ಮಹದೇವಭಾಯಿ ಗಾಂಧೀಜಿಯ ಕಾರ್ಯದರ್ಶಿಗಳೆಂದು ಹೆಸರಾಗಿದಾರೆ. ಆದರೆ ಎಲ್ಲ ಕಾರ್ಯದರ್ಶಿಗಳಂತಲ್ಲ ಇವರು. ಯಜಮಾನರ ಪತ್ರವ್ಯವಹಾರ, ಬಂದು ಹೋಗುವವರು, ಲೆಕ್ಕಾಚಾರ—ಇಷ್ಟೇ ಅವರ ಲೋಕ. ಮಹದೇವ ಭಾಯಿ ಹಾಗೆ ಅಲ್ಲ. ಗಾಂಧೀಜೀ ಹಾಗೆ ತಿಳಿದೂ ಇಲ್ಲ. ರಾಜಕಾರಣವೇನು ಅಧ್ಯಾತ್ಮವೇನು—ಲೋಕಾಂತವೇನು ಏಕಾಂತವೇನು ಎಲ್ಲದರಲ್ಲೂ ಎಡಬಿಡದೆ ಇವರು ಅವರ ಜೀವದ ಗೆಳೆಯನಂತೆ ನಡೆಯುತ್ತಾರೆ. ಇವರಿಲ್ಲದೆ ಗಾಂಧೀಜಿಗೆ ಒಂದು ದಿನವೂ ನಡೆಯದು. ಯಾವ ಕೆಲಸದಲ್ಲೂ ಮಹ-ದೇವಭಾಯಿ ಬೇಕು ಅವರಿಗೆ. ಸಂಗಡಿಗರೊಡನೆ ಸಂಭಾಷಣೆ, ಇದಿರಾಳಿಗಳೊಡನೆ ಸಂಧಾನ, ನಾಯಕರೊಡನೆ ಚರ್ಚೆ— ಎಲ್ಲಕ್ಕೂ ಅವರ ಪಾಲಿಗೆ ಇವರು ಸಾಕ್ಷಿಯಾಗಿರಬೇಕು. ಗಾಂಧೀಜಿಯ ಎಲ್ಲ ಕೆಲಸಗಳಲ್ಲೂ ಎಲ್ಲ ವಿಚಾರಗಳಲ್ಲೂ ಇವರು ಒಂದು ಬಗೆಯ ಆತ್ಮಸಾಕ್ಷಿ

---

* 'ಪಟ್ಟ ಶಿಷ್ಯ' ವರ್ಧಾಯಾತ್ರೆಯಿಂದ. ೧೯೩೯

## ಮಹದೇವ ದೇಸಾಯಿ

ಸಾಧಾರಣವಾಗಿ ಮಹದೇವಭಾಯಿ ಇರುವುದು ವರ್ಧಾದಲ್ಲಿ; ಮಗನ ವಾಡಿಯಲ್ಲಿ. ಇವರು, ಇವರ ಹೆಂಡತಿ ದುರ್ಗಾಬೇನ್ ಒಬ್ಬ ಮಗ ಇಷ್ಟು ಅವರ ಅರ್ಧಸಂಸಾರ. ಇವರಿಗೆಲ್ಲ ಒಂದು ಕೋಣೆಯಲ್ಲಿ ಅರ್ಧವಾದರೆ ಇವರ ಉಳಿದರ್ಧ ಸಂಸಾರವಾದ ಪುಸ್ತಕಗಳಿಗೆ ಉಳಿದೆಲ್ಲ ಮನೆಯಾಗಬೇಕು. ಮನೆತುಂಬ ಎಲ್ಲಿ ನೋಡಿದರೂ ಪುಸ್ತಕವೇ ಪುಸ್ತಕ. ಮಹದೇವ ಭಾಯಿಗೆ ಓದುವ ಹುಚ್ಚು ಬಹಳ. ಸದಾ ಓದುತ್ತಲೇ ಇರುತ್ತಾರೆ. ಅವರ ಪುಸ್ತಕ ಭಾಂಡಾರ ಬಹಳ ಅಮೂಲ್ಯವಾದುದು. ಜಗತ್ತಿನಲ್ಲಿ ಇಂಗ್ಲೀಷಭಾಷೆಯ ಎಲ್ಲ ಮುಖ್ಯ ಗ್ರಂಥಕರ್ತರಿಗೂ ತಮ್ಮ ಪುಸ್ತಕವನ್ನು ಮಹದೇವ ದೇಸಾಯಿಯ ಸಂಗ್ರಹಕ್ಕೆ ಕಳಿಸುವುದರಲ್ಲಿ ತುಂಬಾ ಸಂತೋಷ. ಇತರ ಭಾಷೆಗಳವೂ ಬರುತ್ತವೆ. ಯಾವುದನ್ನೂ ಬಿಡದೆ ಓದಲು ಹೋಗುತ್ತಾರೆ ಇವರು. ನಡು ರಾತ್ರಿಯವರೆಗೆ ದೀಪ ಉರಿಸುವುದು ಇವರಿಗೆ ರೂಢಿಯೇ ಆಗಿ ಹೋಗಿದೆ.

ಓದಿದುದನ್ನೆಲ್ಲ ಅರಗಿಸಿಕೊಂಡು ಬರೆಹಗಳಲ್ಲಿ ಉಪಯೋಗಮಾಡುವ ಚಾತುರ್ಯ ಇವರಿಗಿದೆ. ಹರಿಜನದಲ್ಲಿ M D ಎಂಬ ಅಕ್ಷರಗಳಿಂದ ಬರುವ ಹೃದ್ಯವಾದ ಗದ್ಯ ಇವರದು. ಇಂಗ್ಲೀಷು ಶೈಲಿಯಲ್ಲಿ M. D. ಯದು ಒಂದು ವಿಶಿಷ್ಟಸ್ಥಾನ. 'ನಿರಾಭರಣ ಸುಂದರಿ'ಯಂತೆ ಆ ಶೈಲಿ ಸರಲ ಮಧುರವಾಗಿದೆ. ಆ ಲೇಖನಗಳಲ್ಲಿ ಬರುವ ದೃಷ್ಟಾಂತ ಪ್ರಮಾಣಗಳನ್ನು ನೋಡಿದರೆ ಅವರ ಈ ಅಗಾಧ ಪಾಂಡಿತ್ಯದ ಗುರುತಾಗುತ್ತದೆ.

ಗಾಂಧೀಜಿಗೂ ಇವರಿಗೂ ಈ ವಿಷಯದಲ್ಲಿ ಕಾಂಚನಗಂಗೆ ಕನ್ಯಾ ಕುಮಾರಿಗಳಿಗಿದ್ದಷ್ಟು ಅಂತರ. ಗಾಂಧೀಜಿಗೆ ಅತಿಯಾಗಿ ಓದುವುದು ಸೇರು ವುದಿಲ್ಲ. ಮುಖ್ಯವಾದುದನ್ನು ಅಗತ್ಯವಾದುದನ್ನು ಮಾತ್ರ ಓದಿದರೆ ಸರಿ. ಉಳಿದುದೆಲ್ಲ ಕಬ್ಬಿನ ಸಿಪ್ಪೆಯೆಂದು ಅವರ ಅಭಿಪ್ರಾಯ.

ಇಂಗ್ಲೆಂಡಿನಲ್ಲಿ ಜಾನ್‌ಸನ್ ಎಂಬ ಸಾಹಿತಿಗೆ ಬಾಸ್‌ವೆಲ್ ಎಂಬ ಗೆಳೆಯನಿದ್ದ. ಜಾನ್‌ಸನ್ನನ ಜೀವನದ ಪ್ರಸಂಗಗಳನ್ನು ಆಯಾ ದಿನವೇ ಬರೆದಿಡುತ್ತ, ಮುಂದೆ ತನ್ನ ಗೆಳೆಯನ ಜೀವನಚರಿತೆಯನ್ನು ವಿಸ್ತಾರವಾಗಿ ಬರೆದು ನಡೆದುದನ್ನು ನಡೆದಂತೆ ವರ್ಣಿಸಿದ. ಹಾಗೆ ಯಾರ ಜೀವನವನ್ನೂ ಚಿತ್ರಗುಪ್ತನಂತೆ ಚಿತ್ರಿಸುವ ಕೆಲಸ ಇನ್ನೆಲ್ಲೂ ನಡೆದಿಲ್ಲ. ಮಹದೇವ ದೇಸಾಯಿ ಬಾಸ್‌ವೆಲ್ಲನ ಹಾದಿ ಹಿಡಿದಿದಾರೆ. ದಿನದಿನವೂ ಗಾಂಧೀಜಿಯ ಜೀವನ

ವನ್ನು ಚಿತ್ರಿಸುತ್ತಿದಾರೆ. 'ಬಾಸ್‌ವೆಲ್ಲನನ್ನು ಮೀರಿಸುತ್ತಿದಾನೆ ಮಹದೇವ' He is out-Boswelling Boswell himself ಎಂದು ಗಾಂಧೀಜಿಯೇ ಹೇಳಿದರು.

ದಿನವೂ ಮಗನವಾಡಿಯಿಂದ ಅಂಚೆ ಬಂದ ಮೇಲೆ ಅದನ್ನು ತೆಗೆದುಕೊಂಡು ಸೇಗಾಂವಿಗೆ ದೇಸಾಯರ ಪಯಣ; ಮಳೆಬರಲಿ ಚಳಿಯಿರಲಿ, ಬಿಸಿಲು ಉರಿಯಲಿ, ಕೆಸರು ತುಂಬಿರಲಿ. ಈ ನಾಲ್ಕಾರು ವರ್ಷ ಹೀಗೇ ಕಳೆದಿದಾರೆ. ಇಂಥ ಉಗ್ರ ತಪಸ್ಸು ಜಗತ್ತಿನಲ್ಲಿ ಯಾವ ನಾಯಕನ ಯಾವ ಕಾರ್ಯದರ್ಶಿಗೂ ಸಾಧ್ಯವಲ್ಲ. ಮಹದೇವ ದೇಸಾಯರ ಅನನ್ಯ ಶ್ರದ್ಧೆ, ಗಾಂಧೀಜಿಯಲ್ಲಿ ಅವರಿಗಿರುವ ಅಚಲ ನಿಷ್ಠೆ ಅವರ ಸೇವೆಯಲ್ಲಿ ಇವರು ಪಡೆಯುವ ಆನಂದ 'ನಭೂತೋ ನ ಭವಿಷ್ಯತಿ' ಗುರುವಿಗಾಗಿ ಹಿರಿಯನಿಗಾಗಿ ತಮ್ಮ ಇಡೀ ಜೀವನವನ್ನೇ ಹೀಗೆ ಧಾರೆಯೆರೆದ ಪುಣ್ಯಶ್ಲೋಕರು ಮಾನವ ಜಾತಿಯ ಇತಿಹಾಸದಲ್ಲೇ ಕಡಿಮೆ. ಈ ಕಾಲದಲ್ಲಂತೂ ಆ ಧೈರ್ಯ ಇವರದೊಬ್ಬರದೇ ಸರಿ.

ಮಹದೇವ ದೇಸಾಯಿ ಗುಜರಾತಿ ಜನ. ಕಾಲೇಜಿನಲ್ಲಿ ಸಿಡಿಲುಮರಿಯೆಂದು ಹೆಸರಾದ ವಿದ್ಯಾರ್ಥಿ. ಗಾಂಧೀಜಿ ದಕ್ಷಿಣ ಆಫ್ರಿಕದಿಂದ ಆ ಹೊತ್ತಿಗೆ ಬಾರದೆ ಇದ್ದರೆ ವಕೀಲಿಯಲ್ಲಿ ಮುಂದುವರಿದು ಶ್ರೀಮಂತರಾಗಬಹುದಾಗಿತ್ತು. ದೇವರು ಆ ಅನುಕೂಲಗಳನ್ನು ಅವರಿಗೆ ಕೊಟ್ಟೇ ಇದ್ದ. ಆದರೆ ಆ ಬಂಧನ ಸಾರರಹಿತ ಸ್ವಾರ್ಥಜೀವನ ಇವರಿಗೆ ಹೇಗೆ ರುಚಿಸಬೇಕು? ಗಾಂಧೀಜೀ ಗುಜರಾತಿಗೆ ಬಂದೊಡನೆ ಆ ಗುಂಪಿಗೆ ಸೇರಿ ಬಿಟ್ಟರು.

ಗಾಂಧೀಜಿಯ ಸಹವಾಸ ಸುಖವಾದುದಲ್ಲ. ಅವರ ಕಠೋರ ನಿಯಮಗಳೂ ಉಗ್ರ ಸರಳತೆಯೂ ಜೀವನವನ್ನು ಸುಖ ವಿಲಾಸಗಳ ಕಡೆ ಒಯ್ಯುವದಿಲ್ಲ. ಕರ್ತವ್ಯವೇ ಸೌಂದರ್ಯ, ಆನಂದವೆನ್ನುವ ದೃಷ್ಟಿ ಅವರದು. ಅವರೊಡನೆ ಇರುವುದೆಂದರೆ ಮುಳ್ಳಿನ ಹಾಸಿಗೆಯ ಮೇಲೆ ಮಲಗಿದಂತೆಯೆ. 'ನನ್ನ ಸಹವಾಸವೆಂದರೆ, ನಿನಗೆ ಗೊತ್ತಿದೆ ತಾನೆ ಗಲ್ಲಿಗೇರುವ ಸಂದರ್ಭ ಎಂದಿಗೂ ಬರದೆ ಹೋಗಬಹುದು. ಆದರೆ ಸಿಂಹಾಸನವನ್ನು ಹತ್ತುವಂತೆ, ನಿನ್ನ ಕಚೇರಿ ಕುರ್ಚಿಯ ಮೇಲೆ ಕೂಡುವಂತೆ ಗಳಿಗೆಗಳಿಗೆಗೂ ಅದನ್ನು ಏರಲು ಸಿದ್ಧನಿರಬೇಕು' ಎಂದು ಗಾಂಧೀಜಿ ತಮ್ಮ ಶಿಷ್ಯರೊಬ್ಬರಿಗೆ ಬರೆದಿದ್ದರು. ಎಷ್ಟೋ

ಜನ ಈ ಕಂಟಕ ಕಿರೀಟಧಾರಣೆಗೆ ಹಿಂದೆಗೆದಿದಾರೆ. ಮಹದೇವಭಾಯಿಗಂತೂ ಈ ಅಗ್ನಿನಾರಾಯಣನ ಅಂಚಿಗೇ ಇದ್ದು ಬಾಳಬೇಕಾಗಿದೆ. ಇವರು ಈ ಅಗ್ನಿಪರೀಕ್ಷೆಯಲ್ಲಿ ಅಮರತೆಯನ್ನು ಸಾಧಿಸಿಕೊಂಡಿದಾರೆ. ತಮ್ಮ ರೆಕ್ಕೆ ಸುಟ್ಟುಕೊಳ್ಳಲಿಲ್ಲ.

ಇಪ್ಪತ್ತು ವರ್ಷಗಳಿಂದ ಗಾಂಧೀಜಿಯ ಸೇವೆಯನ್ನು ದೇಸಾಯಿ ಅವಿಶ್ರಾಂತವಾಗಿ ನಡೆಸಿದಾರೆ. ಮೊದಲು 'ಯಂಗ ಇಂಡಿಯಾ' ಈಚೆಗೆ 'ಹರಿಜನ' ಇವೆರಡೂ ಪತ್ರಿಕೆಗಳನ್ನು ಗಾಂಧೀಜೀ ನಡೆಸಿದುದು ಇವರ ಬಲದಿಂದ. ಆ ಪತ್ರಿಕೆಗಳು ಎಲ್ಲ ಪತ್ರಗಳಂತೆ ಸುದ್ದಿಯ ಪತ್ರಗಳಲ್ಲ. ಅದೊಂದು ಸಾಪ್ತಾಹಿಕ ಸಂದೇಶ. ಹತ್ತು ಜನರ ಅಭಿಪ್ರಾಯಗಳ ಸಂಗ್ರಹವೂ ಅಲ್ಲ. ಗಾಂಧೀಜಿ ರಾಷ್ಟ್ರನಿರ್ಮಾಣ ಕಾರ್ಯದಲ್ಲಿ ಈ ಇಪ್ಪತ್ತು ವರ್ಷ ದೇಶಕ್ಕೆ, ಕೆಲಸಗಾರರಿಗೆ ವಾರವಾರವೂ ಕೊಡುತ್ತಿದ್ದ ಪಾಠ. ಅವರಿಗೆ ತಮ್ಮ ಸಿದ್ಧಾಂತ ಗಳನ್ನು ಜನರಿಗೆ ತಿಳಿಸುವ ಸಾಧನ ಇವು. ಈ ಕೆಲಸದಲ್ಲಿ ಮಹದೇವ ದೇಸಾಯಿ, ಪ್ಯಾರೆಲಾಲಜಿ ಇಬ್ಬರೂ ಗಾಂಧೀಜಿಗೆ ನೆರವಾಗುತ್ತಿದಾರೆ. ಮಹದೇವ ದೇಸಾಯಿ ವಾರವಾರವೂ ಗಾಂಧೀಜಿಯ ಜೀವನವನ್ನು ಮುದ್ದಾಗಿ ಚಿತ್ರಿಸುತ್ತ ದೇಶದಲ್ಲಿ ಅವರ ಬಗ್ಗೆ ಅಪಾರ ಭಕ್ತಿಯನ್ನುಂಟುಮಾಡಿದರು. ತಮ್ಮ ಮೋಹಕವಾದ ಶೈಲಿಯಲ್ಲಿ ಗಾಂಧೀಜಿಯ ಸಿದ್ಧಾಂತಗಳನ್ನು ವಿವರಿಸಿ ಜನರಿಗೆ ರುಚಿಸುವಂತೆ ಮಾಡಿದಾರೆ. ನಿಜವಾಗಿ ದೇಸಾಯರ ಕೈವಾಡವಿಲ್ಲದ 'ಹರಿಜನ' ಸ್ವಲ್ಪ ಸಪ್ಪೆಯೇನೋ ಅನಿಸುತ್ತದೆ. ಕಳೆದ ವರುಷ ಇವರು ಬೇನೆ ಬಿದ್ದು ವರ್ಧಾದಿಂದ ಸಿಮ್ಲಾಕ್ಕೆ ಆರೋಗ್ಯಕ್ಕಾಗಿ ಹೋದಾಗ ಗಾಂಧೀ ಜಿಗೆ ಬಹಳ ನೋವಾಯಿತು.? ಹರಿಜನದ ಸಂಪಾದನ ಕಾರ್ಯದಲ್ಲಿ ಇದರಿಂದ ಆಗುವ ಲೋಪಗಳನ್ನು ಮನ್ನಿಸಬೇಕೆಂದು ಕೇಳಿದರು. ಹರಿಜನ ನಿಂತರೂ ನಿಲ್ಲಬಹುದು ಎಂದರು.

ಪತ್ರಿಕಾವ್ಯವಸಾಯದಲ್ಲಿ ಈ ಗುರುಶಿಷ್ಯರಿಬ್ಬರೂ ಸೇರಿ ಮಾಡಿದ ಕ್ರಾಂತಿ ಅನುಪಮವಾದುದು. ಇತಿಹಾಸದಲ್ಲೇ ಇಂಥದಾಗಿಲ್ಲ ಸಂಪಾದಕೀ ಯವನ್ನು 'ನಾನು' ಎಂದು ಪ್ರಥಮಪುರುಷ ಏಕವಚನದಲ್ಲಿ ಮೊದಲು ಬರೆ ದದ್ದು ಗಾಂಧೀಜೀ. ಇನ್ನೂ ಯಾರಿಗೂ ಅದನ್ನು ಅನುಕರಿಸುವ ಧೈರ್ಯ ವಾಗಿಲ್ಲ. ಒಂದೇ ಒಂದು ವ್ಯಕ್ತಿಯ ಅಭಿಪ್ರಾಯಗಳೆ ಸಲುವಾಗಿ ಎಲ್ಲೂ

ಪತ್ರಿಕೆ ಹೊರಟಿಲ್ಲ. ಹೊರಡುವ ಸಂಭವವೂ ಕಾಣುವದಿಲ್ಲ. ಮಹದೇವ ಭಾಯಿಯ ಹಾಗೆ ತನ್ನ ಗುರು–ನಾಯಕನ ಜೀವನವನ್ನು ದಿನದಿನವೂ ಚಿತ್ರಿಸುತ್ತ ಬಂದವರಿಲ್ಲ. ಪತ್ರಿಕಾವ್ಯವಸಾಯದಲ್ಲಿ ಸತ್ಯ ಸಂಯಮಗಳನ್ನು ತಂದು ದೇಸಾಯಿ ಒಂದು ಮಾದರಿಯಾಗಿದ್ದಾರೆ. ತರುಣರಿಗೆ ಒಂದು ಸ್ಫೂರ್ತಿಯಾಗಿದ್ದಾರೆ. ಗಾಂಧೀಜಿ ಒಮ್ಮೆ ಬರೆದರು: 'ಕೈಯಲ್ಲಿ ಲೇಖನಿ ಹಿಡಿದೇ ತನ್ನ ಕೊನೆಯ ಗಳಿಗೆ ಕಳೆಯಲು ಮಹದೇವ ಸದಾ ಸಿದ್ಧ.' ಇದಕ್ಕಿಂತ ಚನ್ನಾದ ವ್ಯಂಗ್ಯಚಿತ್ರ ದೇಸಾಯರದು ಯಾರೂ ಬರೆಯಲಾರರು.

ಮಹದೇವ ಭಾಯಿ ಬರೀ ಗೊಡ್ಡು ಪಂಡಿತರಲ್ಲ; ಒಣ ಬರೆಹಗಾರರೂ ಅಲ್ಲ; ತುಂಬಾ ರಸಿಕರು. ಇವರದು ಕಲೆಯ ಕೈ. ಸಾಹಿತ್ಯದಲ್ಲಿ ಇವರಿಗೆ ಪೂರಾ ಒಲವು. ಇಂಗ್ಲೀಷು ಸಂಸ್ಕೃತ ಹಿಂದೀ ಸಾಹಿತ್ಯದಿಂದ ಆಗಾಗ ಚೆಲುವಿನ ನುಡಿಗಳನ್ನೂ ಉದಾಹರಿಸುತ್ತಾರೆ. ಪ್ರಾರ್ಥನೆಗೆ ಕೂತರೆ ಪದಗಳನ್ನು ಶ್ರಾವ್ಯವಾಗಿ ಅನ್ನುವಷ್ಟು ಶಾರೀರವಿದೆ ಇವರಿಗೆ. ಇವರ ಕಲೆಯನ್ನು ನೋಡಬೇಕಾದುದು ಅರ್ಥಶಾಸ್ತ್ರ ವೇದಾಂತ ಮುಂತಾದ ವಿಷಯಗಳನ್ನು ಇವರು ಸುಲಿದ ಬಾಳೆಯ ಹಣ್ಣಿನಂತೆ ವಿವರಿಸುವುದರಲ್ಲಿ. ಇವರ ಲೇಖನಿಯೊಂದು ಯಕ್ಷದಂಡ, ಅದರಲ್ಲೊಂದು ಬಗೆಯ ಇಂದ್ರಜಾಲವಿದೆಯೆಂದರೆ ಏನೂ ಹೆಚ್ಚು ಹೇಳಿದಂತಾಗಲಿಲ್ಲ.

ಮಹದೇವ ದೇಸಾಯಿಯ ಜೀವನದಲ್ಲೂ ಕಲಾವಂತಿಕೆಯಿದೆ, ಕೇವಲ ಸಾಹಿತ್ಯದಲ್ಲೇ ಅಲ್ಲ. ಇವರು ಗಾಂಧೀಜನ. ಜೀವನದಲ್ಲಿ ಬೆರೆತು ಬರಲಾರದ ಕಲೆ ಇವರಿಗೆ ಕಲೆಯಲ್ಲ. ಇವರ ಸಜ್ಜಾದ ಕೋಣೆಯನ್ನು ನೋಡಿದರೆ ಇದು ತಿಳಿಯುತ್ತದೆ. ಎಲ್ಲಾ ಚೊಕ್ಕಟ ಜಳಜಳ. ಎಲ್ಲ ಪದಾರ್ಥಗಳೂ ತಮ್ಮ ತಮ್ಮ ಸ್ಥಾನದಲ್ಲಿ ಇರುತ್ತವೆ. ವೇಷದಲ್ಲಿಯಂತೂ ಶುದ್ಧ ಬಿಳೀ ಖಾದಿ. ಕೈ ತಪ್ಪಿಯಾದರೂ ಮಾಸಿದ ಬಟ್ಟೆ ತೊಡುವದಿಲ್ಲ. ಮಾತಿನಲ್ಲಿ ಸವಿಜೇನು-ಹಿತವಾಗಿ ರುಚಿಯಾಗಿ ತರ್ಕಮಾಡುತ್ತ ಇದಿರಾಳಿಯನ್ನು ತಮ್ಮ ಅಭಿಪ್ರಾಯಕ್ಕೇ ತಿರುಗಿಸುತ್ತಾರೆ.

ಈ ಹಿಡಿತವೇ ಇವರನ್ನು ಗಾಂಧೀಜಿಯ 'ದೂತ'ನನ್ನಾಗಿ ಮಾಡಿದೆ. ಮಹಾದೇವ ಭಾಯಿಯ ಸಂಧಾನಕೌಶಲ ಈಚೆಗೆ ಹಿಂದುಸ್ಥಾನಕ್ಕೆ ಗೊತ್ತೇ ಆಗಿದೆ. ಸರದಾರ ಪೃಥ್ವೀ ಸಿಂಗರ ಬಿಡುಗಡೆ, ದೆಹಲಿಯ ರಾಜಕೀಯ

ಸ್ವಾತಂತ್ರ್ಯ ಇವರ ಕೈವಾಡದ ಫಲ. ವೈಯಕ್ತಿಕ ಜೀವನಗಳಲ್ಲಿ, ರಾಷ್ಟ್ರೀಯ ಜೀವನದಲ್ಲಿ ಇವರ ಆ ನೈಪುಣ್ಯ ಹೇಗೆ ಪರಿಣಾಮಕಾರಿಯಾಗಿವೆ ಎಂಬುದು ಜನರಿಗೆ ತಿಳಿಯುವದು ಕಷ್ಟ.

ಇವರ ಬಾಳಿಗೇ ಬಣ್ಣ ಕೊಟ್ಟ ಈ ಕಲಾವಂತಿಕೆಗೆ ಇವರ ಸ್ವಾವಲಂಬನೆ ಆತ್ಮನಿರೀಕ್ಷಣೆಗಳೇ ತಳಹದಿಯೆನ್ನಬಹುದು. ದೇಸಾಯಿ ಎಲ್ಲ ಕೆಲಸವನ್ನು ತಾವೇ ಮಾಡಿಕೊಳ್ಳುತ್ತಾರೆ. ತಮ್ಮ ಅರಿವೆ ಅಂಚಡಿ ತಾವೇ ಒಗೆದು ಮಡಿ ಮಾಡುತ್ತಾರೆ. ತಮ್ಮ ಕೋಣೆ ತಾವೇ ಗುಡಿಸುತ್ತಾರೆ ತಮ್ಮ ಎಲ್ಲ ವಸ್ತುಗಳನ್ನೂ ತಾವೇ ಸರಿಯಾಗಿಡುತ್ತಾರೆ. ದುರ್ಗಾಬೇನ್ ಇದ್ದರೂ ಈ ಕಾರ್ಯಕ್ರಮದಲ್ಲಿ ವ್ಯತ್ಯಾಸವೇನೂ ಆಗುವುದಿಲ್ಲ. ಆತ್ಮನಿರೀಕ್ಷಣೆಯು ಗಾಂಧೀಗುಂಪಿಗೆ ಒಂದು ಲಕ್ಷಣವಾದರೂ ದೇಸಾಯಿ ಒಂದು ತೂಕ ಹೆಚ್ಚು. ಅವರ ಹತ್ತಿರ ಯಾವಾಗಲೂ ಒಂದು ಡಿಕ್ಷನರಿ ಇದ್ದೇ ತೀರಬೇಕು. ಯಾವ ಮಾತು ಎಲ್ಲಿ ಒಂದು ಬಣ್ಣ ಹೆಚ್ಚಾಯಿತೋ ಏನೋ, ಇನ್ನೂ ತುಸು ಸವಿಮಾಡಲು ಬಂದರೆ ಏಕೆ ಬೇಡ ಎಂದು ತೂಕ ಮಾಡುವ ಸ್ವಭಾವ.

ಸರಳತೆಯೂ ಮಹದೇವಭಾಯಿಯ ಜೀವನಕ್ಕೊಂದು ಸಿಂಗಾರವಾಗಿದೆ ಇಡೀ ಹಿಂದುಸ್ತಾನಕ್ಕೇ–ಕೆಲವು ಮಟ್ಟಿಗೆ ಜಗತ್ತು–ಇವರದು ಕೇಂದ್ರ ಕಾರ್ಯಾಲಯ. ಆದರೂ ಕುರ್ಚಿಯಿಲ್ಲ ಮೇಜಿಲ್ಲ. ಇವರಿಗೆ ಕಾರ್ಯಾಲಯವೊಂದು ಖಾಸಗೀ ಕೋಣೆಯೊಂದು, ಹೀಗೆ ಎರಡಿಲ್ಲ. ಎಲ್ಲಾ ಒಂದೇ. ನೆಲದ ಮೇಲೆ ಅಲ್ಲೇ ತಯಾರಾದ ಒಂದು ಚಾಪೆ. ಸುತ್ತಲೂ ಪತ್ರಿಕೆ, ಪತ್ರ, ಪುಸ್ತಕ. ಒಂದು ಮೂಲೆಯಲ್ಲಿ ರಾಟಿ. ಇದುರಿನಲ್ಲಿ ಉರುಟಾದ ಕಪಾಟುಗಳು; ಅವುಗಳ ತುಂಬ ಪುಸ್ತಕ ಕಾಗದ. ಇವರ ಕಣ್ಣಿನ ಕನ್ನಡಕ ಕೂಡಾ ನಿಕಲ್ ಕಟ್ಟಿನದು. ಅದೂ ಓಬಿರಾಯನ ಕಾಲದ್ದು.

ದುರ್ಗಾಬೇನಳ ಮಾತು ಬಂತಷ್ಟೆ. ಆಕೆ ಇಂದಿಗೂ ಸನಾತನಿ. ಗಾಂಧೀಜಿಯ ಅನೇಕ ಸುಧಾರಣೆಗಳು ಆಕೆಗೆ ಒಗ್ಗುವುದಿಲ್ಲ. ಮಹದೇವಭಾಯಿ ಹರಿಜನರ ವಿಷಯವಾಗಿ ಮಾಡಬಹುದಾದ ಆಚರಣೆ ಆಕೆಗೆ ಸರಿಕಾಣುವದಿಲ್ಲ. ಆದರೆ ಇವರ ದಾಂಪತ್ಯದಲ್ಲಿ ಎಳ್ಳಷ್ಟೂ ವಿರಸವಿಲ್ಲ. ಆಕೆಗೆ ತನ್ನ ಮನಸ್ಸಿಗೆ ಬಂದಂತೆ ನಡೆಯಲು ಸಂಪೂರ್ಣ ಸ್ವಾತಂತ್ರ್ಯವಿದೆ.

ಮಹಾದೇವ ದೇಸಾಯಿ ಈ ವಿಷಯದಲ್ಲಿ ಗಾಂಧೀಗುಂಪಿಗೆ ಆದರ್ಶವಾಗಿ ದಾರೆ. ಗಾಂಧೀಜೀ ಕೂಡ ಕಸ್ತೂರಬಾಗೆ ಅಷ್ಟು ಸ್ವಾತಂತ್ರ್ಯವನ್ನೂ ಕೊಟ್ಟಿರಲಿಲ್ಲವೇನೋ ಎನ್ನಿಸುತ್ತದೆ.

ಕೆಲವು ಕಾಲದ ಹಿಂದೆ ಮಹದೇವ ದೇಸಾಯಿ ಸಂಸಾರ ಸಮೇತರಾಗಿ ಉತ್ಕಲಕ್ಕೆ ಹೋಗಿದ್ದರು. ಜಗನ್ನಾಥ ಕ್ಷೇತ್ರಕ್ಕೂ ಹೋದರು. ದೇವರ ದರ್ಶನ ಮಾಡಿಕೊಂಡು ಬರೋಣವೆಂದು ದುರ್ಗಾಬೇನಳ ಆಸೆ. ಆದರೆ ಆ ಮಂದಿರದಲ್ಲಿ ಗಾಂಧೀ ಜನಕ್ಕೆ ಪ್ರವೇಶವಿಲ್ಲ. ಹರಿಜನರಿಗೆ ಪ್ರವೇಶವಿಲ್ಲದ ದೇವಾಲಯಗಳಲ್ಲಿ ತಾವು ಕಾಲಿಡುವದಿಲ್ಲವೆಂದು ರಾಮೇಶ್ವರದಲ್ಲಿ ಗಾಂಧೀಜೀ ಶಪಥ ಮಾಡಿದ ದಿನವೇ ಗಾಂಧೀವಾದಿಗಳಿಗೆ ಅದೊಂದು ಸಂಪ್ರದಾಯ ವಾಯಿತು. ಮಹದೇವಭಾಯಿಗೆ ಬಹಳ ಪೇಚಿಗಿಟ್ಟಿತು. ಜೀವನದ ಜೊತೆಗಾತಿ ಆದವಳಿಗೆ ತಾವು ಕೊಡಬಹುದಾದ ಸುಖ ಬಹಳ ಕಡಮೆ. ಆಕೆಗೂ ಏನೂ ಬಯಸುವ ಸ್ವಭಾವವಿಲ್ಲ. ಆದರೆ, ಆಕೆಯ ತೃಪ್ತಿಗಾಗಿ ಎಂದು ತಾವು ಜಗನ್ನಾಥ ದರ್ಶನಮಾಡಿದರೆ ಬಾಪು ಸಿಟ್ಟಾಗುವುದು ನಿಜ. ಗಾಂಧೀವಾದಿ ಗಳೆಲ್ಲರೂ ಮೂಗು ಮುರಿಯುವುದಂತೂ ಶತಸ್ಸಿದ್ಧ. ಕಡೆಗೆ ಮಹದೇವ ಭಾಯಿಯ ಸಮರಸ ಜೀವನ, ಕಲಾವಂತಿಕೆಗೇ ಜಯವಾಯಿತು. ಸತ್ಯ ಅಹಿಂಸೆಗಳನ್ನು ಹೊಸ ಬಣ್ಣದಲ್ಲಿ ತೋರಿಸಿದರು.

ಉತ್ಕಲದಿಂದ ಮರಳಿ ಬಂದಮೇಲೆ ಇದೊಂದು ದುರಂತ ಪ್ರಕರಣವೇ ಆಯಿತು. ಮಹದೇವನಂಥವನು ಕೂಡಾ ಹೀಗೆ ಮಾಡಿದರೆ ಗಾಂಧೀವಾದದ ಗತಿಯೇನು ಎಂದು ಗುಲ್ಲು ಮೊದಲಾಯಿತು. ಗಾಂಧೀಜಿಗೂ ಇವರು ಮಾಡಿದುದು ಸರಿ ಕಾಣಲಿಲ್ಲ. ಒಂದು ದಿನ ಕೊಂಚ ಬಲವಾಗಿಯೇ ವಷಟ್ಕಾರ ವಾಯಿತು. ಹಿಂದೆ ಎಷ್ಟೋ ಸಲ ಗಾಂಧೀಜೀ ಶಿಷ್ಯನನ್ನು ಕಟುವಾಗಿ ಟೀಕಿ ಸಿದುದುಂಟು. ಕೆಲವು ಸಲ ಸತ್ಯಾಗ್ರಹ ಮಾಡಿದುದೂ ನಿಜ. ಒಮ್ಮೆ ಉಪವಾಸವನ್ನೂ ಮಾಡಿದರೋ ಏನೋ! ಅದನ್ನೆಲ್ಲ ಭಾಯಿ ಹರಕೆ ಹಸಾದ ವೆಂದು ಹೊತ್ತಿದ್ದರು. ಅದರಿಂದ ತಮ್ಮ ಬಾಳನ್ನು ಹಸಮಾಡಿಕೊಂಡರು. ಆಗ ತಾನು ಮಾಡಿದುದು ತಪ್ಪು; ತಿಳಿಯದೆ ಮಾಡಿದ ಕೆಲಸ. ಇದು ಮಾತ್ರ ತಾನು ತಿಳಿದು ಮಾಡಿದ ಸತ್ಯಕರ್ಮ. ಗಾಂಧೀಜಿಯೊಡನೆ ತಮ್ಮದು ಸರಿ ಯೆಂದು ವಾದಿಸಿದರು. ಇಬ್ಬರಿಗೂ ಸಮಾಧಾನವಾಗಲಿಲ್ಲ.

ಮಹದೇವಭಾಯಿ ಬಹಳ ಕರಗಿ ಹೋದರು. ಗುರುಚರಣಗಳನ್ನು ಕಣ್ಣೀರಿನಿಂದ ತೊಳೆದು ವರ್ಧಾಕ್ಕೆ ಹಿಂದಿರುಗಿ ಬಂದರು. ದುರ್ಗಾಬೇನ್ ಇವರಿಗಾಗಿ ಕಾದಿದ್ದಳು. ಅಂದೇ ಗಾಂಧೀಜಿಗೆ ಮಹದೇವ ದೇಸಾಯಿಯ ರಾಜೀನಾಮೆಯ ಚೀಟಿ ತಲುಪಿತು.

ಕಾವ್ಯ ಕಾದಂಬರಿಗಳಲ್ಲೂ ಕಾಣಬರದ ಘಟ್ಟ ಅದು. ಕಲ್ಪನೆಯ ಕಿರುಗೈಗೆ ಎಟುಕದ ಸತ್ಯವೃತ್ತ. ನಿಜವಾಗಿಯೂ ಸತ್ಯದ ಸವಿ ಸೊಬಗು ಕಲ್ಪನೆಯಲ್ಲಿಲ್ಲ.

ಗುರು–ಶಿಷ್ಯರ ನಡುವೆ ಒಂದು ಅಗ್ನಿಪರೀಕ್ಷೆಯೇ ಆಯಿತು. ದೇವರ ಮನಸಿಗೆ ಇಷ್ಟು ಸಾಕು ಎನಿಸಿದರೆ ನಾನು ಮಾಡುವುದಾದರೂ ಏನು ? ಗುರುಸೇವೆ, ತದ್ವಾರಾ ದೇಶಸೇವೆ ಈ ೨೦ ವರ್ಷ ಮಾಡಿಸಿದವನು ಅವನು ಇಂದಿಗೆ ನನ್ನ ಕೆಲಸ ಮುಗಿಯಿತು, ಎಂದು ಅವನೆಂದರೆ ನನಗೆ ತಳಮಳವೇಕೆ? ಹೀಗೆ ಮಹಾದೇವ ದೇಸಾಯಿಯ ವಿಚಾರ ನಡೆದಿತ್ತು. 'ದೇವರು ಕಲ್ಲಾದರೆ ಭಕ್ತನೂ ಪಾಷಾಣವಾಗಬೇಕೆ ! ಇದೆಲ್ಲಿಯ ನ್ಯಾಯ ?' ಎಂದು ಕೊರಗಿದರು ಗಾಂಧೀಜೀ.

ಕೊನೆಗೆ ಇಬ್ಬರೂ ಸೋತರು; ಸೋತು ಗೆದ್ದರು. ಮಹದೇವ ಹವೆ ಬದಲಿಸಲು ಸಿಮ್ಲಾಕ್ಕೆ ಹೋಗಬೇಕಾಯಿತು. ಹೋಗುವ ಮುನ್ನವೇ ರಾಜೀನಾಮೆಯ ಕಾಗದದ ಚೂರುಗಳು ಸೇಗಾಂವ ಹೊಲಗಳಲ್ಲಿ ಹಾರಿ ಅಡಗಿಕೊಂಡಿದ್ದವು.

ಮಹಾದೇವಭಾಯಿ ಗಾಂಧೀಜಿಗೆ ಲಕ್ಷ್ಮಣನಿದ್ದಂತೆ, ಆತ್ಮಸಾಕ್ಷಿಯಂತೆ ಎಂದು ಹೇಳಿದುದು ನಿಜ. ಸಾಧಾರಣವಾಗಿ ಗುರು-ಶಿಷ್ಯರ ಸಂಬಂಧ ಸೂಜಿಗಲ್ಲು–ಕಬ್ಬಿಣದ ರೀತಿ. ಇವರದು ಹಾಗಿಲ್ಲ, ಪರಸ್ಪರವಾದ ಸೆಳೆತ. ಅವರಂಥ ಗುರು ದೊರೆತುದು ಇವರ ಜೀವನದ ಭಾಗ್ಯವಾದರೆ, ಇವರಂಥ ಶಿಷ್ಯ ಲಭಿಸಿದುದೂ ಅವರ ಪುಣ್ಯದ ಫಲ. ರಾಮಕೃಷ್ಣ ಪರಮಹಂಸರ ಸರ್ವ ತಪಸ್ಸನ್ನೂ ಹೀರಿ, ಗುರುವನ್ನು ಬೆಳಗಿಸಿ ವಿವೇಕಾನಂದಸ್ವಾಮಿ ಶಿಷ್ಯತ್ವದ ಆದರ್ಶವನ್ನು ಜಗತ್ತಿಗೆ ತೋರಿದರು. ಮಹದೇವಭಾಯಿ ಗುರುವಿನ ಜೀವನದಲ್ಲಿ ತಮ್ಮ ಜೀವನವನ್ನು ಲೀನಗೊಳಿಸಿ, ಅವರ ಶ್ರುತಿಗೆ ತಮ್ಮ ದನಿಗೂಡಿಸಿ, ಅವರ ಕುಂಚಕ್ಕೆ ತಮ್ಮ ಬಣ್ಣ ಒದಗಿಸಿ ರಸಮಯ ಗೆಳೆತನದ ಆದರ್ಶ ಚಿತ್ರವನ್ನು ತೋರುತ್ತಿದ್ದಾರೆ.

---

# ನೆರವು



| | | | |
|---|---|---|---|
| ಶ್ರೀ ಜಿ. ಕೆ. ಕೇಳಕರ ಒಡೆಯರು, ಸ್ವದೇಶಿಪೇಪರ ಮಾರ್ಟ, ಧಾರವಾಡ | ೫೦ | ೦ | ೦ |
| ಶ್ರೀಮತಿ ಇಂದಿರಾದೇವಿ ಪಂಡಿತ, ಪುಣೆ | ೧೦ | ೦ | ೦ |
| ಶ್ರೀ ಎಸ್. ಎನ್. ರಾಮಮೂರ್ತಿ B. A. B. L; M. L. C. ವಿರಾಜಪೇಟೆ | ೧೦ | ೦ | ೦ |
| ಶ್ರೀ. ಚಿದಂಬರರಾವ ಸರದೇಶಪಾಂಡೆ, ಮುನವಳ್ಳಿ | ೧೦ | ೦ | ೦ |
| ಶ್ರೀ. ಎನ್. ಆರ್. ಗೋಪಾಲಕೃಷ್ಣ B. A. B. L. ಪಬ್ಲಿಕ್ ಪ್ರಾಸಿಕ್ಯೂಟರ, ಮಡಿಕೇರಿ | ೧೦ | ೦ | ೦ |
| ಪ್ರೊ. ಕೆ. ಜಿ. ಕುಂದಣಗಾರ, ಎಂ. ಎ. ಕೊಲ್ಲಾಪುರ | ೧೦ | ೦ | ೦ |
| ಶ್ರೀ. ದೇಸಾಯಿ ನಾಗೇಶರಾಯರು, ಅಮರಗೋಳ | ೧೦ | ೦ | ೦ |
| ಶ್ರೀ ದೇಸಾಯಿ ಕೃಷ್ಣರಾಯರು ಬೆಳಗಲಿ; ಹುಬ್ಬಳ್ಳಿ | ೧೦ | ೦ | ೦ |
| ಶ್ರೀ. ರಾಯದುರ್ಗ ಕೃಷ್ಣರಾಯರು, ಧಾರವಾಡ | ೧೦ | ೦ | ೦ |
| ಶ್ರೀಮತಿ ಜಯಲಕ್ಷ್ಮೀ ಆರ್. ಶ್ರೀನಿವಾಸನ್, ಚಿಕ್ಕಮಗಳೂರು | ೫ | ೦ | ೦ |
| ಮೆಸರ್ಸ ಅಂಕೋಲಾ ಕಿರಾಣಿಸ್ಟೋರ್ಸ, ಧಾರವಾಡ | ೫ | ೦ | ೦ |
| ಶ್ರೀ. ಗುಡಿಹಾಳ ಹನುಮಂತರಾಯರು, ರಾಯಚೂರು | ೫ | ೦ | ೦ |
| ಶ್ರೀ. ಜಿ. ಎನ್. ಕಲಮದಾನಿ, ಹುಬ್ಬಳ್ಳಿ | ೫ | ೦ | ೦ |
| ಶ್ರೀ. ಬಿ. ಎ. ಪಾಟೀಲ, ಇಟಗಿ | ೫ | ೦ | ೦ |
| ಶ್ರೀ ಎಲ್. ವಿ. ನಾಯಕ, ರಾಮದುರ್ಗ | ೫ | ೦ | ೦ |
| ಶ್ರೀ. ಕೆ. ಎಸ್. ಕುಲಕರ್ಣಿ, ಶಿರಕೋಳ | ೫ | ೦ | ೦ |
| ಶ್ರೀ. ಎಂ. ಶ್ರೀನಿವಾಸನ್. ಬಿ. ಎ. ಹಾಸನ | ೫ | ೦ | ೦ |
| ಶ್ರೀ. ಶ್ರೀಪಾದ ರಾಮಚಂದ್ರ ದೇಶಪಾಂಡೆ, B Sc. | ೫ | ೦ | ೦ |
| ಶ್ರೀ. ಜೆ. ವಾಮನಭಟ್ಟ. B. A. L. T. ಮಂಗಳೂರು | ೫ | ೦ | ೦ |

ಶ್ರೀಮಂತ ಶಂಕರಪ್ಪಗೌಡಾ ಶಿಕ್ಕೇದೇಸಾಯಿ ಅಣ್ಣೀಗೇರಿ ೫ ೦ ೦

ಶ್ರೀ. ಡಿ. ಕೃಷ್ಣ ಅಯಂಗಾರ. M. A. F. R. E. S. ಮೈಸೂರು ೫ ೦ ೦

ಶೀ. ಜಿ. ಜಿ. ಪತಕಿ, M A. B. T. ವಿಜಾಪುರ ೫ ೦ ೦

ಶ್ರೀ. ಹಳಪೇಟಿ ಚಿಂತಾಮಣರಾಯರು ಧಾರವಾಡ ೫ ೦ ೦

ಶ್ರೀ. ಆರ್. ವಿ. ಬೆಟಗೇರಿ ಅಮರಗೋಳ ೫ ೦ ೦

ಶ್ರೀ. ವಿ. ಬಿ. ಹನಸಿ ಅಮರಗೋಳ ೫ ೦ ೦

ಶ್ರೀ. ಲಂಡೋಜಿ ಶಿವಪ್ಪಗೌಡರು ಬೇಗೂರು ೫ ೦ ೦

ಶ್ರೀ. ಬೆಳವಡಿ ಗೋಪಾಳರಾಯರು ಬೆಳವಡಿ ೫ ೦ ೦

ಶ್ರೀ. ವಾಮನರಾವ ರಾಮರಾವ ನಾಡಗೌಡ, ಗರಗ ೫ ೦ ೦

ಶ್ರೀ. ಮೋಹನರಾವ ಕರೀಕಟ್ಟಿ B. A. ಧಾರವಾಡ ೫ ೦ ೦

ಶೀ. ಎಸ್. ಕೆ. ಗಡ. B. A. (Hons) B T. ಧಾರವಾಡ ೫ ೦ ೦

ಈ ಮಹನೀಯರು ಲಲಿತ ಸಾಹಿತ್ಯಮಾಲೆಯ ಆರಂಭದಲ್ಲಿ ಪೋಷಣೆಯಿತ್ತು ಸಹಾಯ ಮಾಡಿದ್ದಾರೆ. ಇವರಿಗೆಲ್ಲ ನಮ್ಮ ಕೃತಜ್ಞತೆಯ ವಂದನೆಗಳು.

— ಸಂಪಾದಕ

# ಮನೋಹರ ಗ್ರಂಥ ಭಾಂಡಾರ, ಧಾರವಾಡ

## ಲಲಿತವಾಙ್ಮಯ

| | | |
|---|---|---|
| ಅರತಿ | ಕನ್ನಡತಿಯರು | ೦-೧೨-೦ |
| ಚಿಗುರು | ಸೌ. ಗೌತಮ್ಮ | ೦-೧೪-೦ |
| ಮೊಪಾಸಾನ ಕಥೆಗಳು | ಚುಳಕಿ | ೦-೧೨-೦ |
| ಚಿತ್ರ (ಶರಚ್ಚಂದ್ರ) | ಮಲ್ಲಾರಿ | ೦-೧೦-೦ |
| ಅಕ್ಕಾಜಿ | ,, | ೦-೧೦-೦ |
| ಬೆಳಕಿನ ಕತ್ತಲೆ | ,, | ೦-೧೨-೦ |
| ಕುಲದೀಪಕರು | ಸಿದ್ದವನಹಳ್ಳಿ | ೦-೧೦-೦ |
| ಮುಳ್ಳುಬೇಲಿ | ಚಾಲುಕ್ಯ | ೧- ೦-೦ |
| ಲಹರಿ | ಕಲಮದಾನಿ | ೦- ೬-೦ |
| ದೂರ ಹೋದಳು | ಭಾರತೀಸುತ | ೦- ೬-೦ |
| ವೀಣಾನಾದ | ಕೃ. ಹ. ಕು. | ೦- ೮-೦ |
| ಬೆಳ್ಳಿಯ ಹಬ್ಬ | ಎನ್. ಕೆ. ಕು. | ೦- ೮-೦ |
| ಇಲೆಕ್ಷನ್ | ,, | ೦- ೪-೦ |
| ಕಲ್ಕಿ | ರಮಾಕಾಂತ | ೦-೧೦-೦ |
| ಕಣ್ಣಲ್ಲಿ ಬಟ್ಟು | ,, | ೦- ೪-೦ |
| ಹೆಣ್ಣಿನ ತೊಡಕು | ಟೇಂಗ್ಸೆ | ೦- ೪-೦ |

## ಉದಾತ್ತವಾಙ್ಮಯ

| | | |
|---|---|---|
| ಭಕ್ತಿಯೋಗ (ವಿವೇಕಾನಂದ) | ಗೊರೂರ | ೦-೧೦-೦ |
| ಪರ್ಣಕುಟಿ | ಸಿದ್ದವನಹಳ್ಳಿ | ೧- ೮-೦ |
| ಯತಿರಾಮಾನುಜ | ,, | ೦- ೯-೦ |
| ಕಲೋಪಾಸಕ | ಗೋಕಾಕ | ೧- ೦-೦ |
| ಪಯಣ | ,, | ೦-೧೨-೦ |
| ಸಮುದ್ರದಾಚೆಯಿಂದ | ,, | ೨- ೦-೦ |
| ಕವಿಕಾವ್ಯ ಮಹೋನ್ನತಿ | ,, | ೦-೧೦-೦ |
| ಮೂರ್ತಿ | ಬೇಂದ್ರೆ | ೦- ೭-೦ |
| ಚಂದ್ರಹಾಸ (ಲಕ್ಷ್ಮೀಶ) | ,, | ೦- ೭-೦ |
| ಹರಿಹರದೇವ | ಕುಂದಣಗಾರ | ೧-೧೨-೦ |
| ಮಹಾದೇವಿಯಕ್ಕ | ,, | ೧- ೦-೦ |

## ಬಾಲವಾಙ್ಮಯ

| | | |
|---|---|---|
| ಬೆಲ್ಲಾ ಹಿಟ್ಟು | ವಸಂತ | ೦-೨-೦ |
| ಪೊನ್ನಮ್ಮ | ಗೌರಮ್ಮ | ೦- ೧-೬ |

ಇದಲ್ಲದೆ

**ಲಲಿತ ಸಾಹಿತ್ಯ ಮಾಲೆ, ಗಾಂಧೀ ಸಾಹಿತ್ಯ**

**ಅರವಿಂದ ಗ್ರಂಥ ಮಾಲೆ,**

**ಪ್ರೇಮ ಪ್ರಕಟನಾಲಯ,**

ಇವೆಲ್ಲ ಪ್ರಕಟನೆಗಳ ಅಧಿಕೃತ ಮಾರಾಟಗಾರರು.

**ಯಾವ ಕನ್ನಡ ಪುಸ್ತಕ ಬೇಕಾದರೂ ಬರೆಯಿರಿ**

ಶಾಖೆ: **ಕನ್ನಡ ಪುಸ್ತಕಾಲಯ, ಬೆಳಗಾವಿ**